

26

# ಅಚಲ

ದ್ವೈಮಾಸಿಕ

ಜನವರಿ 1995

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

* ನೇಮಿಚಂದ್ರ
* ಸಾರಾ ಅಬೂಬಕರ್
* ಶಾಂತಾ ನಾಗರಾಜ್

"ಅಚಲ" ಪತ್ರಿಕೆಯನ್ನು ಪಡೆಯ ಬಯಸು ವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟ ವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸು ವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.







ಚಂದಾ ವಿವರ :

| | | | |
|---|---|---|---|
| ವಾರ್ಷಿಕ ಚಂದಾ | : | ರೂ. | 15_00 |
| ಅಜೀವ ಚಂದಾ | : | ರೂ. | 150_00 |
| ಚೆಕ್ ಮೂಲಕ | : | ರೂ. | 160_00 |
| ಸಂಸ್ಥೆಗಳಿಗೆ | : | ರೂ. | 200_00 |
| ಬಿಡಿ ಪ್ರತಿ | : | ರೂ. | 2_00 |
| ವಿಶೇಷ ಪ್ರತಿ | : | ರೂ. | 3_50 |



Printed at LIPI MUDRANA
Bugle Rock Road, Gandhibazar
Basavanagudi, BANGALORE-560 004.

Published by : Dr. Ramakrishna
on behalf of Jagruthi Mahila Adhyayana
Kendra, 26, I Main Road, Vyalikaval
BANGALORE-560 003
Editor : **N. Gayathri**

## ಒಳಗೇನಿದೆ ?





**ಲೇಖನ, ಹಣ ಕಳುಹಿಸಬೇಕಾದ ವಿಳಾಸ :**

**ಎನ್. ಗಾಯತ್ರಿ**
ಬಿ_30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇಕ್ರಾಸ್, ಒಂದನೆ ಮೇನ್, ವಿಜಯನಗರ
2ನೇ ಹಂತ. ಬೆಂಗಳೂರು_560 0040



ಸದ್ಯದಲ್ಲಿಯೇ ಕರ್ನಾಟಕದಲ್ಲಿ ಮಹಿಳಾ ಆಯೋಗ ವನ್ನು ರಚಿಸುವ ಸುದ್ದಿ ಪತ್ರಿಕೆಯಲ್ಲಿ ಬಂದಿತ್ತು. ಈ ಸಂದರ್ಭದಲ್ಲಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಜನವಾದಿ ಮಹಿಳಾ ಸಂಘಟನೆ. ಮಹಿಳಾ ದಕ್ಷತಾ ಸಮಿತಿ, ಸುಮಂಗಲಿ ಸೇವಾಶ್ರಮ ಮತ್ತು ಮಹಿಳಾ ಒಕ್ಕೂಟದ ಪದಾಧಿಕಾರಿಗಳು ಒಂದು ಜಂಟಿ ನಿಯೋಗ ವನ್ನು ತೆಗೆದುಕೊಂಡು ಮಹಿಳಾ ಮತ್ತು ಮಕ್ಕಳ ಇಲಾಖೆಯ ಮಂತ್ರಿ ಶ್ರೀಮತಿ ಬಿ. ಟಿ. ಲಲಿತಾನಾಯಕ್ ರವರನ್ನು ಭೇಟಿ ಮಾಡಿದರು, ಆಗ ಮಹಿಳಾ ಆಯೋಗ ವನ್ನು ಅಂತಿಮವಾಗಿ ರಚಿಸಿ ಜಾರಿಗೆ ತರುವ ಮುನ್ನ ಮಹಿಳಾ ಸಂಘಟನೆಗಳೊಡನೆ ಚರ್ಚಿಸಬೇಕೆಂದು ಒತ್ತಾ- ಯಿಸಿದರು.

# ಸಂಪಾದಕೀಯ

**ಸಂಗಾತಿಗಳೇ,**

ಹೊಸ ವರ್ಷದ ಶುಭಾಶಯಗಳು. ಕಳೆದ ವರ್ಷದ ಸಿಹಿಕಹಿಯ ಅನುಭವದೊಂದಿಗೆ ಹೊಸ ವರ್ಷ ಕಾಲಿಟ್ಟಿದೆ. ಕೇಂದ್ರದಲ್ಲಿ ಅಧಿಕಾರಾರೂಢವಾಗಿರುವ ಕಾಂಗ್ರೆಸ್ ಸರ್ಕಾರ ರಾಜ್ಯದಲ್ಲಿ ನೆಲಕಚ್ಚಿ ಜನತಾದಳ ಸರ್ಕಾರ ಆಡಳಿತಕ್ಕೆ ಬಂದಿದೆ. ಇಂದು ಈ ಸರ್ಕಾರದ ಮಂತ್ರಿಮಂಡಲದಲ್ಲೂ ಹಿಂದೆ ಕುಖ್ಯಾತವಾದ ಘಟನೆಗಳಿಗೆ ಕಾರಣರಾದ ವ್ಯಕ್ತಿಗಳು ಚುನಾಯಿಸಿ ಬಂದಿದ್ದಾರೆ. ಇದೂ ಕೂಡ ನಮ್ಮ ದೇಶದ ಪ್ರಜಾಪ್ರಭುತ್ವದ ದುರಂತ ಅಣಕ. ಮತ್ತೆ ಮತ್ತೆ ಪದ್ದಕ್ಕನ ಪ್ರಕರಣಗಳು ನಡೆಯದಂತೆ ಇವರುಗಳು ವರ್ತಿಸುವರೆಂದು ಆಶಿಸೋಣ.

ಕಳೆದ ಡಿಸೆಂಬರ್‌ನಲ್ಲಿ ನಡೆದ ಘಟನೆಯೊಂದು ಸಮೂಹ ಮಾಧ್ಯಮಗಳಲ್ಲಿ ಬಿತ್ತರಗೊಂಡು ಕೊಟ್ಟ ಅನುಭವ ಚಿಂತನೆಗೆ ದಾರಿ ಮಾಡಿಕೊಡುವಂತಿದೆ. ಸವದತ್ತಿಯಲ್ಲಿ ಯಲ್ಲಮ್ಮ ದೇವಸ್ಥಾನದ ಮುಂದೆ ಒಂದು ನೂತನ ರೀತಿಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು, ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ದೇವಿ. ಮೈರಾಡ, ಜಿಲ್ಲಾ ಪಂಚಾಯಿತಿ ಮತ್ತು ಅಕ್ಷರ ಪ್ರಭಾವಗಳು ಜಂಟಿಯಾಗಿ ಹಮ್ಮಿಕೊಂಡ ಈ ಕಾರ್ಯಕ್ರಮದಲ್ಲಿ ಸುಮಾರು 90 ಗ್ರಾಮಗಳಿಂದ ಬಂದ 1500 ಜನ ದೇವದಾಸಿಯರು ಕೈಗೆ ಬಳೆ ತೊಡುವುದರ ಮೂಲಕ ದೇವದಾಸಿ ಪದ್ಧತಿಗೆ ತಿಲಾಂಜಲಿ ನೀಡುವ ಪಣತೊಟ್ಟರು. ವ್ಯವಸ್ಥಾಪಕರು, ದೇವದಾಸಿಯರಿಗೆ ಬಳೆಗಳನ್ನು ವಿತರಣೆ ಮಾಡಿದರೆ, ಸಮಾರಂಭಕ್ಕೆ ಆಗಮಿಸಿದ್ದ ಮಠಾಧಿಪತಿಗಳು ಅನಿಷ್ಟ ಆಚರಣೆಗಳನ್ನು ಕೈಬಿಡಲು ಕರೆ ನೀಡಿದರು. ಕೊನೆಯಲ್ಲಿ ಈ ಆಚರಣೆಗಳನ್ನು ಕುರಿತಂತೆ ಹರಿಕಥೆಯೂ ನಡೆಯಿತು.

ಈ ಎಲ್ಲ ಆಚರಣೆಗಳ ಹಿಂದಿರುವ ಸದುದ್ದೇಶವನ್ನು ಯಾರೂ ಶಂಕಿಸಬೇಕಾಗಿಲ್ಲವಾದರೂ ಇಂತಹದೊಂದು ಕಾರ್ಯಕ್ರಮದಲ್ಲಿ ಆದ್ಯತೆ, ಒತ್ತು ಯಾವುದರ ಕಡೆಗಿರಬೇಕು ಎಂಬುದು ಇನ್ನೂ ಹೆಚ್ಚು ಗಂಭೀರವಾಗಿ ಚಿಂತಿಸಬೇಕಾದ ಅವಶ್ಯಕತೆಯಿದೆ. ಈ ವಿಶಿಷ್ಟ ಮಹಿಳಾ ಸಮುದಾಯಕ್ಕೆ ಸಾಮಾಜಿಕ ಜಾಗೃತಿಯೊಂದಿಗೆ ಆರ್ಥಿಕ ಭದ್ರತೆಯು ಅಗತ್ಯವಿದೆ. ಸರ್ಕಾರದ ಯೋಜನೆಗಳ ಫಲ ಮಧ್ಯವರ್ತಿಗಳ ಪಾಲಾಗದೆ ನೇರವಾಗಿ ಅವರಿಗೇ ತಲುಪುವಂತೆ ನೋಡಿಕೊಳ್ಳಬೇಕಿದೆ. ಈ ಮಹಿಳೆಯರ ಶೋಷಣೆಯು ಬಹು ಮುಖ್ಯವಾಗಿ ಧಾರ್ಮಿಕ ಮೂಢ ನಂಬಿಕೆಯ ತಳಹದಿಯ ಮೇಲೆ ನಿಂತಿರುವಂತದ್ದು ಎಂಬುದನ್ನು ಮಠಾಧೀಶರು ಮೊದಲು ಗಮನಿಸಬೇಕು. ಕುದುರೆ ಮೋತಿಯಂಥ ಪ್ರಕರಣಗಳ ಸಂದರ್ಭದಲ್ಲಿ ಮಠಾಧಿಪತಿಗಳು ತೆಗೆದುಕೊಂಡ ನಿಲುವು ಎಂತಹುದು ಎಂಬುದು ಎಲ್ಲರಿಗೂ ತಿಳಿದಿದೆ.

ಬಹುಮುಖ್ಯವಾಗಿ 'ಬಳೆ'ಯನ್ನು ಹೆಣ್ಣಿನ ಸೌಭಾಗ್ಯದ, ಸುಮಂಗಲೀತನದ ಸಂಕೇತವೆಂದು ನಮ್ಮ ಸಂಸ್ಕೃತಿ ಆದಕ್ಕಿರುವ ನೇತ್ಯಾತ್ಮಕ ಅರ್ಥವನ್ನು ಗೌಣವಾಗಿಸಿದೆ. ಕಾರ್ತಿಕೇಯನ ಕೈಯಲ್ಲಿ ಜಮದಗ್ನಿ ಮಹರ್ಷಿ ಹತನಾದ ಕಾರಣ ಹೋಸ್ತಿಲ ಹುಣ್ಣಿಮೆಯ ಹಿಂದಿನ ದಿನದ ರಾತ್ರಿ ರೇಣುಕಾ ಯಲ್ಲಮ್ಮನ ಜೊತೆ ದೇವದಾಸಿಯರು ಬಳೆ ಒಡೆದುಕೊಂಡು ವಿಧವೆಯರಾಗುತ್ತಿದ್ದರು. ಆದ್ದರಿಂದಲೇ ಇದಕ್ಕೆ ರಂಡಿ ಹುಣ್ಣಿಮೆ ಎಂದು ಹೆಸರು. ಇಂತಹ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಳೆ ತೊಟ್ಟು 'ರಂಡಿ'ಯ ಸ್ಥಾನದ ಅನಿವಾರ್ಯತೆಯನ್ನು ಅಣಕಿಸುವ, ಆಚರಣೆ ಎಷ್ಟು ಸರಿ ? ಹೆಣ್ಣಿನ ಶ್ರೇಷ್ಠತೆ ಅವಳ ಬಳೆ, ಕುಂಕುಮಗಳಲ್ಲೇ ಇದೆಯೆಂಬ ಸಾಂಪ್ರದಾಯಿಕ ಆಚರಣೆಯನ್ನು ಮತ್ತೂ ಪುಷ್ಟೀಕರಿಸುವ ಇಂತಹ ಆಚರಣೆಗಳ ಬಗ್ಗೆ ಹೊಸ ದೃಷ್ಟಿಕೋನದ ಅಗತ್ಯವಿದೆ. ದೂರದರ್ಶನ, ಪತ್ರಿಕೆಗಳಂತೂ ಸಂಘಟಕರು ಈಗಾಗಲೇ ನಡೆಸಿರಬಹುದಾದ, ನಡೆಸಬೇಕಾದ ಆರ್ಥಿಕ ಕಾರ್ಯಕ್ರಮಗಳಿಗೆ ಒತ್ತುಕೊಡುವುದಕ್ಕಿಂತ ಹೆಚ್ಚಾಗಿ ಬಳೆ ತೊಟ್ಟ ದೇವದಾಸಿಯರ ವೈಭವೀಕರಣಕ್ಕೆ ಹೆಚ್ಚು ಗಮನಕೊಟ್ಟಂತಿತ್ತು.

ಸಂಸ್ಕೃತಿಯ ಪುನರ್‌ವ್ಯಾಖ್ಯೆ ಮತ್ತು ಪುನರ್ ನಿರ್ಮಾಣದ ಅಗತ್ಯ ಎಷ್ಟೊಂದು ತುರ್ತಾಗಿ ಆಗಬೇಕಾಗಿದೆಯೆಂಬುದನ್ನು ಇಲ್ಲಿ ಮತ್ತಷ್ಟು ಒತ್ತಿ ಹೇಳಬೇಕಾಗಿಲ್ಲ.

## ಶ್ರದ್ಧಾಂಜಲಿ

ಹಳೆಯ ವರುಷ ಮುಗಿಯುತ್ತಾ ಬಂದ ದಿನ. ಕರ್ನಾಟಕದ ಜನತೆಗೆ ಬರಸಿಡಿಲು ಬಡಿದಂತೆ ನೋವೇ ನೋವಾಗಿ ಗೋಳು ತುಂಬಿದ ದಿನ. ಡಿಸೆಂಬರ್ 31 ರಂದು ನಡೆದ ಉದ್ಯಾನ್ ಎಕ್ಸ್‌ಪ್ರೆಸ್‌ನ ರೈಲ್ವೇ ದುರಂತ ಹಲವಾರು ಜೀವಗಳನ್ನು ಬಲಿತೆಗೆದುಕೊಂಡಿತು. ಈ ದುರಂತದಲ್ಲಿ ಅಸುನೀಗಿದ ಎಲ್ಲರಿಗೂ ಅಚಲ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

ಈ ದುರಂತದಲ್ಲಿ ಅಸುನೀಗಿದ ನತದೃಷ್ಟರಲ್ಲಿ ಒಬ್ಬರಾದ ಗೆಳೆಯ ಬಿ.ಕೆ. ಸುಂದರೇಶ್ ಅವರ ಕುಟುಂಬದವರಿಗಷ್ಟೇ ಅಲ್ಲದೆ, ಅವರ ಅಸಂಖ್ಯ ಅಭಿಮಾನಿಗಳಿಗೆ, ಮಿತ್ರ ಬಳಗಕ್ಕೆ ತುಂಬಲಾಗದ ನಷ್ಟವನ್ನು, ಭರಿಸಲಾಗದ ದುಃಖವನ್ನು ಬಿಟ್ಟು ಹೊರಟಿದ್ದಾರೆ.

ಚಿಕ್ಕಮಗಳೂರಿನ ಹೆಮ್ಮೆಯ ಪುತ್ರ ಬಿ.ಕೆ. ಸುಂದರೇಶ್ ಸದಾ ನಗುಮುಖದ, ಚೈತನ್ಯಶಾಲಿ ತರುಣ. ಕರ್ನಾಟಕದ ಪ್ರಗತಿಪರ ಚಳುವಳಿಯ ಹಲವಾರು ಸಂಘಟನೆಗಳೊಂದಿಗೆ ಸ್ನೇಹಯುತ ಸಂಪರ್ಕವಿಟ್ಟುಕೊಂಡಿದ್ದ ಸುಂದರೇಶರನ್ನು ಅರಿಯದವರೇ ಇಲ್ಲ. ಕಮ್ಯೂನಿಸ್ಟ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ವಿದ್ಯಾರ್ಥಿ, ಯುವ ರೈತ, ಕಾರ್ಮಿಕ ಸಂಘಟನೆಗಳಲ್ಲೆಲ್ಲಾ ಸಮರ್ಥ ನಾಯಕತ್ವವಹಿಸಿದ ಅಪರೂಪದ ವ್ಯಕ್ತಿ. ಕಳೆದ ಹತ್ತು ವರ್ಷಗಳಿಂದ ಹಲವಾರು ಬಾರಿ ರಾಜ್ಯ ಸಭಾ, ಲೋಕಸಭಾ ಚುನಾವಣೆಗಳಲ್ಲಿ ಸ್ಪರ್ಧಿಸಿ ಸೋತರೂ ಎದುರಾಳಿಗೆ ಸವಾಲೆಸೆದವರು, ಅಪಾರ ಜನಪ್ರಿಯತೆ ಗಳಿಸಿದವರು. ವಿಶೇಷವಾಗಿ ಕರ್ನಾಟಕದ ಅಂಗನವಾಡಿ ಮಹಿಳೆಯರನ್ನು ಬೃಹತ್ ಪ್ರಮಾಣದಲ್ಲಿ ಸಂಘಟಿಸಿ, ಅವರ ಸಮಸ್ಯೆಗಳಿಗಾಗಿ ಶ್ರಮಿಸಿದ ಸಮರ್ಥ ನಾಯಕರಾಗಿದ್ದರು. ಅಂಗನವಾಡಿ ರಾಜ್ಯ ಫೆಡರೇಷನ್ ಪ್ರಧಾನ ಕಾರ್ಯದರ್ಶಿಯಾಗಿದ್ದ ಬಿ.ಕೆ. ಸುಂದರೇಶ್‌ರ ಮರಣ ರಾಜ್ಯದ ಅಂಗನವಾಡಿ ಮಹಿಳೆಯರ ಸಂಘಟನೆಗೆ ಚಳುವಳಿಗೆ ಭಾರಿ ಪೆಟ್ಟಾಗಿದೆ. ಪ್ರಗತಿಪರ ಮನೋಭಾವದ, ಕ್ರಿಯಾಶೀಲ ವ್ಯಕ್ತಿತ್ವದ ಪತ್ನಿ ಮತ್ತು ಪುತ್ರಿಯರಿಂದ ಅಗಲಿರುವ ಸುಂದರೇಶರ ಸಾವಿನ ನಷ್ಟವನ್ನು ಅವರೊಂದಿಗೆ ಅಪಾರ ಸ್ನೇಹಿತರ ಬಳಗವೇ ಅನುಭವಿಸುತ್ತಿದೆ.

ಜೀವನದ ಅತ್ಯಲ್ಪ ಕಾಲದಲ್ಲಿ ಮಹತ್ತನ್ನು ಸಾಧಿಸಿದ ಈ ಯುವ ನಾಯಕನ ಜೀವನ ಹೋರಾಟದಲ್ಲಿ ಭಾಗಿಯಾಗುವ ಎಲ್ಲರಿಗೂ ಸ್ಫೂರ್ತಿಯಾಗುವುದು. ಈ ಧೀರೋದಾತ್ತ ನಾಯಕನಿಗೆ ಅಚಲ ನಮನ ಸಲ್ಲಿಸುತ್ತದೆ.

## । ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನ ।

ಈ ವರ್ಷ ಚೀಣಾದ ರಾಜಧಾನಿ ಬೀಜಿಂಗ್‌ನಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಕುರಿತಂತೆ ಒಂದು ಅಂತರರಾಷ್ಟ್ರೀಯ ಸಮ್ಮೇಳನ ನಡೆಯಲಿದೆ. ಇದರಲ್ಲಿ ಸಲ್ಲಿಸಲೆಂದು ಭಾರತ ಸರ್ಕಾರ ತಯಾರಿಸಿರುವ ದಸ್ತಾವೇಜು ಅಸಮರ್ಪಕವಾಗಿದೆ ಹಾಗೂ ಅಪೂರ್ಣವಾಗಿದೆ ಎಂಬುದು ಹಲವಾರು ಮಹಿಳಾ ಸಂಘಟನೆಗಳ ಆರೋಪ ಈ ದಸ್ತಾವೇಜು ಮೂಲಭೂತವಾದದ, ಕೋಮುವಾದದ ಬೆದರಿಕೆ, ಇದರಲ್ಲಿ ಸರಕಾರದ ಪಾತ್ರ, ಹೊಸ ಆರ್ಥಿಕ ನೀತಿಗಳ ವಿನಾಶಕಾರಿ ಪರಿಣಾಮ, ಜನಸಂಖ್ಯಾ ನೀತಿಗಳಲ್ಲಿನ ಮಹಿಳಾ ವಿರೋಧಿ ಅಂಶಗಳು, ಅಸಮರ್ಪಕ ಶಿಕ್ಷಣ ವ್ಯವಸ್ಥೆ, ಮಾಧ್ಯಮದ ಪಾತ್ರ, ರಾಜಕೀಯ ಅಪರಾಧೀಕರಣ, ಇತ್ಯಾದಿ ವಿಷಯಗಳ ಬಗ್ಗೆ ಮೌನವಾಗಿದೆ, ಅಥವಾ ದುರ್ಬಲವಾಗಿದೆ.

ಆದ್ದರಿಂದ ಭಾರತದಲ್ಲಿ ಮಹಿಳೆಯರ ಸ್ಥಾನಮಾನದ ಬಗ್ಗೆ ಒಂದು ಪರ್ಯಾಯ ವರದಿ ತಯಾರಿಸಲು ಹಲವು ಮಹಿಳಾ ಸಂಘಟನೆಗಳು ನಿರ್ಧರಿಸಿವೆ. ಫೆಬ್ರವರಿ 26-27 ರಂದು ನವದೆಹಲಿಯಲ್ಲಿ ಒಂದು ರಾಷ್ಟ್ರೀಯ ಸಮಾವೇಶವನ್ನು ಕರೆಯಲಾಗಿದ್ದು ದೇಶಾದ್ಯಂತ ಹಲವಾರು ಮಹಿಳಾ ಗುಂಪುಗಳನ್ನು ಇದರಲ್ಲಿ ಭಾಗವಹಿಸಲು ಆಹ್ವಾನಿಸಲಾಗುತ್ತಿದೆ. ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ (AIDWA) ಅಖಿಲ ಭಾರತ ಮಹಿಳಾ ಒಕ್ಕೂಟ (AIWC) ಅಖಿಲ ಭಾರತ ಮಹಿಳಾ ದಕ್ಷತಾ ಸಮಿತಿ, ಮಹಿಳಾ ಅಭಿವೃದ್ಧಿ ಅಧ್ಯಯನ ಕೇಂದ್ರ, ಜಂಟಿ ಮಹಿಳಾ ಕಾರ್ಯಕ್ರಮ, ರಾಷ್ಟ್ರೀಯ ಭಾರತೀಯ ಮಹಿಳಾ ಒಕ್ಕೂಟ (NFIW ಮುಂತಾದ ಮಹಿಳಾ ಸಂಘಟನೆಗಳು ಈ ಸಮಾವೇಶದಲ್ಲಿ ಮುಖ್ಯ ಪಾತ್ರವಹಿಸಲಿವೆ. ಈ ಸಮಾವೇಶದಲ್ಲಿ ಸರಕಾರಿ ದಸ್ತಾವೇಜು ಮೌನವಾಗಿರುವ ಅಥವಾ ದುರ್ಬಲವಾಗಿರುವ ಅಂಶಗಳ ಬಗ್ಗೆ ಒಂದು ಒಮ್ಮತವನ್ನು ರೂಪಿಸಿ ದೇಶದ ಮಹಿಳಾ ಆಂದೋಲನದ ವ್ಯಾಪಕ ವಿಭಾಗದ ಅಭಿಪ್ರಾಯವನ್ನು ಪ್ರತಿಬಿಂಬಿಸುವ ದಸ್ತಾವೇಜು ತಯಾರಿಸುವುದು ಈ ಸಮಾವೇಶದ ಉದ್ದೇಶವಾಗಿದೆ.

# ಇಂಥಾ ಮದುವೆಗಳೂ ಇವೆ ಎಚ್ಚರ

★ ಚಂದ್ರು

ಇತ್ತೀಚೆಗೆ ಆಂಗ್ಲ ಭಾಷೆಯ ಮಹಿಳಾ ಪತ್ರಿಕೆಯೊಂದು 'ವಿಚಿತ್ರ ಆದರೂ ಸತ್ಯ'ವೆಂಬಂಥಾ ಮದುವೆಗಳ ಬಗ್ಗೆ ಬೆಳಕು ಚೆಲ್ಲಿದೆ.

35 ವರ್ಷದ ಶೋಭಾ ಕೊಪಲ್ಲಿ ಮದುವೆಯ ಆಸೆಯನ್ನೇ ಬಿಟ್ಟಿದ್ದಳು. ಬಡ ಕುಟುಂಬದಿಂದ ಬಂದ ಈಕೆಗೆ ಇಬ್ಬರು ತಂಗಿಯರು. ಒಬ್ಬ ತಮ್ಮ, ಬಡತನದಲ್ಲಿ ಹೇಗೂ ಬಿ.ಕಾಮ್. ಮಾಡಿದ್ದಳು. ವರದಕ್ಷಿಣೆಗಾಗಲೀ, ವೈಭವದ ಮದುವೆಗಾಗಲೀ ಹಣವಿಲ್ಲದ ಈಕೆಗೆ ವಿವಾಹ ಕಷ್ಟವಾಯಿತು. 1992ರಲ್ಲಿ ಪತ್ರಿಕೆಯೊಂದರ ಜಾಹಿರಾತಿನ ಮೂಲಕ ಮಾಧವರಾವ್‌ನ ಪರಿಚಯವಾಯಿತು. ಆತ ವಿಚ್ಛೇದಿತ. ಹೈದರಾಬಾದಿನಲ್ಲಿ ಸಹಾಯಕ ವೆಹಿಕಲ್ ಇನ್ಸಪೆಕ್ಟರ್ ಆಗಿದ್ದ. ತನಗೆ ವರದಕ್ಷಿಣೆ ಬೇಡ ಎಂದ ಈತ ದೇವರಂತೆ ಕಂಡಿರಬೇಕು. ವಿಚ್ಛೇದನ ಕಾನೂನು ರೀತಿ ಆಗಿದ್ದು, ಕಾಗದ ಪತ್ರಗಳೆಲ್ಲ ಸರಿ ಇದ್ದವು. 'ನನ್ನ ಮೊದಲ ಪತ್ನಿ ಬಹಳ ದುಂದಿನವಳು' ಎಂದು ತನ್ನ ವಿಚ್ಛೇದನಕ್ಕೆ ಕಾರಣ ನೀಡಿದ್ದ. ಫೆಬ್ರವರಿ 92ರಲ್ಲಿ ಸಾಂಪ್ರದಾಯಿಕವಾಗಿ ಜರುಗಿದ ಸರಳ ವಿವಾಹದಲ್ಲಿ. ಕೇವಲ ಹತ್ತು ಮಂದಿಯ ಎದುರಿನಲ್ಲಿ ಅವರ ವಿವಾಹವಾಯಿತು.

ಆದರೆ ವಿವಾಹದ ನಂತರ ಮಾಧವರಾವ್‌ನ ವರ್ತನೆ ವಿಚಿತ್ರವಿತ್ತು. ಆತ ಶೋಭಾಳನ್ನು ಮುಟ್ಟಲೂ ಇಲ್ಲ. ಮೊದಲ ದಿನದಿಂದಲೇ ಬೇರೆಯೇ ಕೋಣೆಯಲ್ಲಿ ಮಲಗಿದ. ಕಾರಣ ಕೇಳಿದರೆ 'ನನಗಿನ್ನೂ ನನ್ನ ಮೊದಲ ಪತ್ನಿಯಲ್ಲಿ ಪ್ರೀತಿಯಿದೆ' ಎಂದ. ಹಾಗಾದರೆ ಮದುವೆ ಏಕೆ ಮಾಡಿಕೊಂಡದ್ದು ಎನಿಸಿದ್ದುಂಟು. ಬಹುಶಃ ಆ ನೆನಪುಗಳಿಂದ ಹೊರಬರಲು ಕೊಂಚ ಸಮಯ ಬೇಕಾಗಬಹುದೆಂದು ಕಾದದ್ದಾಯಿತು. ವಿವಾಹವಾದೊಡನೆ ಶೋಭಾಳನ್ನೊಂದು ಸಣ್ಣ ಮನೆಯಲ್ಲಿರಿಸಿದ. ತಿಂಗಳಿಗೆ 500 ರೂಪಾಯಿ ಖರ್ಚಿಗೆ ನೀಡಿದ. ಆದರೆ ಶೋಭಾಳ ಬಳಿ ಸುಳಿವುದಿರಲಿ, ಅವಳನ್ನು ಹೊರಗೆಲ್ಲೂ ಯಾವ ಸಮಾರಂಭಕ್ಕೂ ಕರೆದೊಯ್ಯುತ್ತಿರಲಿಲ್ಲ, ತನ್ನ ಪತ್ನಿ ಎಂದು ಪರಿಚಯಿಸುತ್ತಿರಲಿಲ್ಲ. ಆರು ತಿಂಗಳ ಇಂಥಾ ಉಪೇಕ್ಷೆಯಿಂದ ಮನನೊಂದು ಶೋಭಾ ಆತ್ಮಹತ್ಯೆಗೆ ಪ್ರಯತ್ನಿಸಿ ಅಪೋಲೋ ಆಸ್ಪತ್ರೆಗೆ ಸೇರಿದಾಗ, ವೈದ್ಯರಿಗೆ ಪತಿ ನೀಡಿದ ಉತ್ತರ 'ಆಕೆಗೆ ತಲೆ ಸರಿ ಇಲ್ಲ' ಎಂಬುದು.

ಮನೆಗೆ ಹಿಂತಿರುಗಿದ ಶೋಭಾ ಗಂಡನ ವರ್ತನೆಗೆ ಕಾರಣ ಕಂಡು ಹಿಡಿಯಲು ಯತ್ನಿಸಿದಳು. ತನ್ನ ಬಿಡುವಿನ ಸಮಯವನ್ನೆಲ್ಲಾ ಗಂಡ ಮೊದಲ ಪತ್ನಿಯ ಮನೆಯಲ್ಲಿ ಕಳೆಯುತ್ತಿದ್ದ. ಮೊದ ಮೊದಲು 'ಮಕ್ಕಳ ಮೇಲಿನ ಪ್ರೀತಿ' ಎಂದು ತಿಳಿದಿದ್ದ ಶೋಭಾಗೆ ನಿಜ ಸಂಗತಿ ಹೊರಬಿದ್ದಾಗ ಆಘಾತ ಕಾದಿತ್ತು. ತನ್ನ ಹಣವನ್ನೆಲ್ಲ ಮೊದಲ ಪತ್ನಿಗೆ ನೀಡುತ್ತಿದ್ದು, ಭಾರೀ ಮನೆಯಲ್ಲಿ ಐಷಾರಾಮದಲ್ಲಿ, ಕಾರು ಗಾಡಿ ಕೊಂಡು ಕೊಟ್ಟು ಇರಿಸಿದ್ದ ಮೊದಲ ಪತ್ನಿಯನ್ನು, ಮೆಲ್ಲನೆ ಶೋಭಾಗೆ ತನ್ನ ಮದುವೆಯ ಮೋಸ ಅರ್ಥವಾಯಿತು.

ಇತೀಚೆಗೆ ಹುಟ್ಟಿಕೊಂಡು ಹೆಚ್ಚುತ್ತಿರುವ 'ಲಂಚ ಮುಚ್ಚುವ ಮದುವೆ' ಅವಳದ್ದಾಗಿತ್ತು. ಕೆಲವು ವಿಭಾಗದ ಸರಕಾರಿ ನೌಕರರು ಹಿಡಿದಿರುವ ಮೋಸದ ತಂತ್ರ ಹೀಗಿದೆ. ಸಾಕಷ್ಟು ಲಂಚ ಪಡೆವ ವಿಭಾಗದಲ್ಲಿರುವ ಈ ಸರಕಾರಿ ನೌಕರರು, ತಾವು ಗಿಟ್ಟಿಸಿದ ಲಕ್ಷಾಂತರ ರೂಪಾಯಿಗಳ ಲಂಚದ ಹಣದಲ್ಲಿ ವೈಭವದಿಂದ ಬಾಳುವಂತಿಲ್ಲ. ಕಾರಣ ಅವರ ಸಂಬಳ ಬಹಳ ಬಾರಿ ತಿಂಗಳಿಗೆ ನಾಲ್ಕು ಸಾವಿರವನ್ನೂ ದಾಟುವುದಿಲ್ಲ. ಹೀಗಿದ್ದಾಗ ತಮ್ಮ ಲಂಚದ ಹಣವನ್ನು ಪ್ರದರ್ಶಿಸುವಂತಿಲ್ಲ. ಸರಕಾರದ 'ಲಂಚ ವಿರೋಧಿ ವಿಭಾಗ' ಯಾರೇ ತನ್ನ ಗಳಿಕೆಯನ್ನು ಮೀರಿ ಬದುಕುತ್ತಿದ್ದರೆ, ಅವರ ತನಿಖೆಗಿಳಿಯಬಲ್ಲದು. ಲಂಚ ತೆಗೆದುಕೊಂಡದ್ದು ಸಾಬೀತಾದರೆ, ಕೆಲಸ ಕಳಕೊಳ್ಳುವ ಮೂಲಕ ಸಂಬಳದೊಡನೆ ಗಿಂಬಳವನ್ನೂ ಕಳಕೊಳ್ಳುವ ಅಪಾಯವಿರುತ್ತದೆ, 'ಆಂಟಿ ಕರಪ್ಷನ್ ಬ್ಯೂರೋ' ಕಣ್ಣು ತಪ್ಪಿಸಲು ಈ ಲಂಚಕೋರರು ಸುಲಭ ಉಪಾಯ ಕಂಡುಕೊಂಡಿದ್ದಾರೆ. ಗಂಡ–ಹೆಂಡತಿ ಜೊತೆಗೂಡಿ, ಕಾನೂನು ರೀತಿ ವಿಚ್ಛೇದನ ಪಡೆಯುತ್ತಾರೆ, ಹೆಂಡತಿ, ಮಕ್ಕಳೊಡನೆ ಬಾರೀ ಬಂಗಲೆಗೆ ವರ್ಗವಾಗಿ ಸಕಲ ಐಶ್ವರ್ಯದೊಡನೆ ವೈಭವವಾಗಿ ಬದುಕುತ್ತಾಳೆ. ಕಾನೂನು ರೀತಿ ಆಕೆಗೂ ಗಂಡನಿಗೂ ಸಂಬಂಧವಿಲ್ಲದ ಕಾರಣ, ಅವಳ ವೈಭವವನ್ನು ಇವನ ಲಂಚಕ್ಕೆ ತಾಳೆ ಹಾಕುವಂತಿಲ್ಲ. ಆತ

ಬಡ ಹುಡುಗಿಯನ್ನು, ಅಸಹಾಯಕ ಸ್ಥಿತಿಯಲ್ಲಿರುದ ಹೆಣ್ಣೊಂದನ್ನು ಹುಡುಕಿ ಮರುಮದುವೆ ಆಗುತ್ತಾನೆ. ಜಗತ್ತಿನೆರಕಣ್ಣಿಗೆ ಸಣ್ಣ ಮನೆಯಲ್ಲಿ ತನ್ನ ಸಂಬಳದಲ್ಲಿ ಸಾಧಾರಣ ಬದುಕು ಆತನದು. ಆದರೆ ಈ ಎರಡನೇ ಹೆಂಡತಿಯೊಡನೆ ಆತನ ಯಾವ ರೀತಿಯ ಸಂಬಂಧವೂ ಇರುವುದಿಲ್ಲ. ವಿವಾಹವಾದೊಡನೆ ಗಂಡ ತನ್ನ ಮೊದಲ ಪತ್ನಿಯೊಡನೆ ಆರಾಮವಾಗಿ ತನ್ನೆಲ್ಲ ಲಂಚದ ಹಣದ ಲಾಭ ಪಡೆದು ಖುಷಿಯಿಂದ ಬದುಕುತ್ತಾನೆ.

ಇಂಥಾ ಮೋಸದ ಮದುವೆಗೆ ಬಲಿಯಾದ ಶೋಭಾ 'ಸಾವಿ' ಪತ್ರಿಕೆಗೆ ಪತ್ರ ಬರೆದು ತನ್ನ ಕತೆಯನ್ನು ಬಿತ್ತರಿಸಲು ಹೇಳಿಕೊಂಡಿದ್ದಳು. ಇಂಥಾ ಮದುವೆಗೆ ಮತ್ತಷ್ಟು ಹುಡುಗಿಯರು ಬಲಿಯಾಗುವುದು ಬೇಡವೆನ್ನುವ ಶೋಭಾ, ಈ ಸುಲಭ ಮಾರ್ಗದಿಂದ ತಮ್ಮ ಲಂಚದ ಹಣವನ್ನು ಬಚ್ಚಿಡುತ್ತಿರುವ ಜನರಿದ್ದಾರೆ, ಇಂಥಾ 'ಕಾನೂನು ಬದ್ಧ ದ್ವಿಪತ್ನಿತ್ವ'ವನ್ನು ತಡೆಗಟ್ಟಲು ಹೆಣ್ಣು ಹೆತ್ತವರು ಎಚ್ಚರದಿಂದಿರಬೇಕು ಎನ್ನುತ್ತಾಳೆ. ಇಂದು ತನ್ನ ಕಾಲ ಮೇಲೆ ನಿಲಲ್ಲೊಂದು ಕೆಲಸ ಹುಡುಕುತ್ತಿರುವ ಶೋಭಾ, ಕೆಲಸ ಸಿಕ್ಕೊಡನೆ ತನಗೆ ಮೋಸ ಮಾಡಿದ ಈ ಜನರನ್ನು ಕೋರ್ಟಿಗೆಳೆಯಬಯಸುತ್ತಾಳೆ.

ಮಹಿಳೆ ತನ್ನ ಕಾಲ ಮೇಲೆ ನಿಲ್ಲುವ ಅಗತ್ಯ ಎಲ್ಲ ಕಾಲಕ್ಕಿಂತಲೂ ಇಂದಿನ ಪರಿಸ್ಥಿತಿಯಲ್ಲಿ ಮತ್ತೂ ಅವಶ್ಯವಾಗಿದೆ. ಇಂಥಾ ಮೋಸದ ತಂತ್ರಕ್ಕೆ ಬಲಿಯಾಗದಂತೆ ಮಹಿಳೆಯರು ಜಾಗೃತಿ ವಹಿಸಬೇಕಿದೆ. ಇಂಥಾ ವಿಚಿತ್ರ ವಿವಾಹಗಳೂ ಇವೆ ಎಚ್ಚರಿಕೆ ಎಂದು 'ಅಚಲ' ಕೂಡಾ ದನಿಗೂಡಿಸುತ್ತದೆ. ●

## ಹೊರಟಲ್ಲಿಗೇ ಹಿಂತಿರುಗಿದ ಅಮೀನಾ

*ಎನ್ಸಿ

ನಾಲ್ಕು ವರ್ಷದ ಹಿಂದೆ, ಹನ್ನೆರಡು ವರ್ಷದ ಎಳೆಯ ಬಾಲಕಿ ಅಮೀನಾಳನ್ನು, ಅರವತ್ತು ವರ್ಷದ ಅರಬ್ ಶೇಖ್ ಆಲ್–ಸಗಪನ್ ಹಿಡಿತದಿಂದ ಬಿಡಿಸಿ ರಕ್ಷಿಸಿದ ಗಗನ ಸಖಿ ಅಮೃತಾ ಅಹ್ಲುಲಿಯಾಳ ನೆನಪಿರಬೇಕಲ್ಲವೆ? ಪತ್ರಿಕೆಗಳ ತುಂಬಾ ಸುಳಿದಾಡಿದ ಅಮೀನಾಳ ಪ್ರಕರಣ, ಇಂಥಾ ಹುಡುಗಿಯರ ಬದುಕು–ಭವಿಷ್ಯದತ್ತ ಗಮನ ಸೆಳೆದಿತ್ತು. ಇಂದು ಅಮೀನಾ ಎಲ್ಲಿದ್ದಾಳೆ, ಹೇಗಿದ್ದಾಳೆ ಎಂದು ಹುಡುಕಿ ಹೊರಟ 'ಸಾವಿ' ಪತ್ರಿಕೆ ಅಚ್ಚರಿ ಹಾಗೂ ನಿರಾಶೆಯ ಸುದ್ದಿ ಹೊತ್ತು ತಂದಿದೆ.

ಹೈದರಾಬಾದಿನ ಚಾರ್ಮಿನಾರ್ ಬಳಿ ಅಮೀನಾ ತನ್ನ ಕುಟುಂಬದೊಡನಿದ್ದಾಳೆ. ಆರು ಜನ ಮಕ್ಕಳ ಕುಟುಂಬ ತಂದೆ ಬದಿರುದ್ದೀನನದು. ಆಟೋ ಓಡಿಸುವ ಈತನಿಗೆ ಸರಕಾರ ಒಂದು ಎಸ್. ಟಿ.ಡಿ./ಐ.ಎಸ್.ಡಿ ಬೂತ್ ಕೊಡಿಸಿದ್ದೂ ಉಂಟು. ಅದನ್ನು ನೆರೆಮನೆಗೆ ರವಾನಿಸಿದ. ಸರಕಾರ ಈತನ ಮಕ್ಕಳೆಲ್ಲರಿಗೂ ಉಚಿತ ವಿದ್ಯಾಭ್ಯಾಸದ ಆಶ್ವಾಸನೆ ನೀಡಿತು. ಮಕ್ಕಳು ಓದುವ ಬಗ್ಗೆ, ಕೆಲಸ ಮಾಡುವ ಬಗ್ಗೆ ತಂದೆಯದೇನೂ ಅಭ್ಯಂತರವಿಲ್ಲ. ಆದರೆ ಅಮೀನಾಳನ್ನು ಕೇಳಿದರೆ, 'ನನಗೆ ಓದಲು ಇಷ್ಟವಿಲ್ಲ. ಶಾಲೆಗೆ ಹೋಗಲು ಬೆಳಗ್ಗೆ ಬೇಗ ಏಳಬೇಕು, ಅದು ತುಂಬಾ ಕಷ್ಟ' ಎನ್ನುತ್ತಾಳೆ ಅಮೀನಾಳಿಗೆ ಜರಿ ಕೆಲಸದಲ್ಲಿ ತರಪೇತು ಕೊಡಿಸಿ, ಅಮೃತಾ ಅಹ್ಲುವಾಲಿಯ ಆಕೆಗೊಂದು 7000 ರೂಪಾಯಿಯ ಮನೆಯಲ್ಲೇ ಜರಿ ಕೆಲಸ ಮಾಡಲು 'ಫ್ರೇಮ್' ಕೂಡಾ ತಂದು ಕೊಟ್ಟರು, ಆದರೆ ಅಮೀನಾ ಅದನ್ನು ಮೂಲೆಗಿಟ್ಟಿದ್ದಾಳೆ. 'ಅಯ್ಯೋ ಜರಿ ಕೆಲಸ ಕಷ್ಟದ್ದು, ಸೊಂಟ ನೋಯುತ್ತೆ' ಅನ್ನುತ್ತಾಳೆ. 'ಮಹಿಳಾ ದಕ್ಷತಾ ಸಮಿತಿ'ಯ ಅಧ್ಯಕ್ಷೆ, ಸುಮನ್ ಕೃಷ್ಣಕಾಂತ್ ಅಮೀನಾಗೊಂದು ಅಂಗಡಿ ಇಟ್ಟುಕೊಡಲು ಮುಂದೆ ಬಂದರು. 'ನನಗೆ ಮನೆಯಿಂದ ಹೊರಗೆ ಹೋಗಲು ಇಷ್ಟವಿಲ್ಲ. ಅದೂ ಎಲ್ಲಾ ಬಿಟ್ಟು ಕೆಲಸ ಮಾಡಲು. ಈ ಬಸ್ಸುಗಳಲ್ಲಿ ಹೋಗಿ ಬರುವುದು ಕಷ್ಟದ್ದು' ಎನ್ನುತ್ತಾಳೆ ಅಮೀನಾ. ಮತ್ತೆ ಹೇಗೆ ಸಮಯ ಕಳೆಯುತ್ತೀಯಾ ಎಂದರೆ, 'ಟಿ ವಿ ನೋಡುತ್ತಾ, ನನಗೆ ಟಿವಿ ಎಂದರೆ ತುಂಬಾ ಇಷ್ಟ' ಅನ್ನುತ್ತಾಳೆ. ಕಡೆಗೆ ಅಮೀನಾ ಹಿಡಿದು ಬಂದ ಚಾಯಿಯ ಕಪ್ಪು ನೋಡಿ 'ನೀನೆ ಮಾಡಿದ್ದಾ ಅಮೀನಾ' ಎಂದು ಪ್ರಶ್ನಿಸಿದವರಿಗೆ 'ನನಗೆ ಅಡಿಗೆ ಮಾಡೋಕೆ ಇಷ್ಟ ಇಲ್ಲ, ಹೋಟೆಲಿನಿಂದ ತರಿಸಿದ್ದು' ಎಂಬ ಉತ್ತರ. ಮತ್ತೇನಮ್ಮಾ ಮಾಡ್ತೀಯಾ?' ಕೇಳಿದ್ರೆ 'ನಾನು ಮದುವೆಯಾಗ ಬಯಸುತ್ತೇನೆ. ನನಗೆ ಮತ್ತಿನ್ನಾವ ಯೋಚನೆಯೂ ಬರುವುದಿಲ್ಲ, ಅನ್ನುತ್ತಾಳೆ!

ಬದುಕು, ಸಮಾಜ, ಅಮೃತಾ ಅಂಥಾ ಸಹಾಯಕರು ನೂರು ಅವಕಾಶಗಳ ಬಾಗಿಲು ತೆರೆದರೂ, ಕಿಂಚಿತ್ತೂ ಶ್ರಮ ಪಡಲು ಸಿದ್ಧವಿಲ್ಲದೆ ಸುಲಭ ವಿವಾಹದ ಹಾದಿಯನ್ನು ಕಾಯುವ ಅಮೀನಾಳಂಥಾ ಎಳೆ ಹುಡುಗಿಯರಿಗೆ, ಒಂದು ಕೆಟ್ಟ ಅನುಭವದ ನಂತರವೂ ವಿವಾಹವೊಂದು ರಮ್ಯ ಅದ್ಭುತ ಪ್ರಪಂಚ. ಮದುವೆ ಸುಲಭ ಆರಾಮದ ಐಷಾರಾಮದ ಮಾರ್ಗವಾಗಿ ಕಾಣುತ್ತಿರಬೇಕು. ನಮ್ಮ ಹುಡುಗಿಯರನ್ನು ವಿವಾಹಕ್ಕೆ ತಯಾರಿಸುವ ಬದಲು, ಬದುಕಿಗೆ ತಯಾರಿಸುವುದ್ಹೇಗೆ?

# ಮನೆ ಬೆಳಗುವವರ ಬವಣೆ

★ ಶಾಂತಾ ನಾಗರಾಜ್

**ಪ್ರತಿನಿತ್ಯ ನೀವು ಉಂಡು ಇಟ್ಟ ಪಾತ್ರೆಗಳನ್ನು, ನೀವು ತೊಟ್ಟು ಬಿಚ್ಚಿದ ಬಟ್ಟೆಗಳನ್ನೂ ಶುಚಿ ಮಾಡಿ ನಿಮ್ಮ ಹಾಗೂ ನಿಮ್ಮ ಮನೆಯ ಪರಿಸರವನ್ನು ಸಹ್ಯವನ್ನಾಗಿಸುವ ಮನೆ ಕೆಲಸದ ಹೆಣ್ಣು ಮಕ್ಕಳ ಬದುಕು ಮಾತ್ರ ಕತ್ತಿಯ ಮೇಲೆ ನಡೆದಂತೆ. ಅವರ ಕೆಲಸಕ್ಕೆ ಭದ್ರತೆಯಿಲ್ಲ. ವರ್ಷದಿಂದ ವರ್ಷಕ್ಕೆ ಪ್ರಗತಿಯಿಲ್ಲ. ನಿಮ್ಮ ಜೊತೆಯಲ್ಲೇ ಬದುಕು ಸಾಗಿಸುವ ಅವರ ಬಗ್ಗೆ ನಂಬಿಕೆಯಿಲ್ಲ. ಯಾರದ್ದಾದರೂ ಮನೆಯಲ್ಲಿ ಕಳ್ಳತನವಾದರೆ ಪೊಲೀಸರಾದಿಯಾಗಿ ಎಲ್ಲರೂ ಅನುಮಾನಿಸುವುದು ಕೆಲಸದ ಮಹಿಳೆಯರನ್ನು! ಇಂಥ ಅಪನಂಬಿಕೆಯ ನಡುವೆ ಸಾಗುವ ಅವರ ಬದುಕಿನ ಬಗ್ಗೆ ನೀವೆಷ್ಟು ಚಿಂತಿಸುತ್ತೀರಿ?**

ಸಾಧಾರಣ ಮಧ್ಯಮ ವರ್ಗದ ಗೃಹಿಣಿಯರಿಗೆ ಅದರಲ್ಲೂ ಉದ್ಯೋಗಸ್ಥ ಗೃಹಿಣಿಯರಿಗೆ ಮನೆಗೆಲಸದವಳ ವಿನಃ ಬದುಕು ತುಂಬ ದುರ್ಭರವಾಗುತ್ತದೆ. ಒಂದು ದಿನ ಅವಳು ಗೈರುಹಾಜರಿಯಾದರೆ ಸಾಕು ಇವರ ದಿನಚರಿ ಅಸ್ತವ್ಯಸ್ತ. ಇಷ್ಟೊಂದು ಅನಿವಾರ್ಯವಾದ ಈ ಜನರ ಬದುಕು ಬವಣೆಯ ಬಗ್ಗೆ ಹೆಚ್ಚಾಗಿ ನಾವು ವಿಚಾರಿಸಲು ಹೋಗುವುದಿಲ್ಲ. ಹೆಚ್ಚು ಮಾತನಾಡಿಸಿದರೆ ಅವಳು ತಲೆಯೇರಿ ಕುಳಿತಾಳು ಎನ್ನುವ ಭಯ ಸದಾ ನಮ್ಮ ಗೃಹಿಣಿಯರನ್ನು ಕಾಡುತ್ತದೆ. ಆದ್ದರಿಂದ ಸ್ನೇಹದ ದೃಷ್ಟಿಯಿಂದ ಅವಳನ್ನು ಸಾಕಷ್ಟು ಅಂತರದಲ್ಲೇ ಇಟ್ಟಿರುತ್ತಾರೆ. ಕೆಲವು ಮಡಿವಂತರ ಮನೆಗಳಂತೂ ಅವಳಿಗೆ ತಾವು ಕೊಡುವ ಉಪಹಾರ, ಪಾನೀಯಗಳನ್ನು ತಿನ್ನಲು–ಕುಡಿಯಲು ಬೇರೆ ತಟ್ಟೆ ಲೋಟಗಳನ್ನು ಇರಿಸಿ ತಾವು ಅವಳಿಗಿಂತ ಮೇಲು ಮತ್ತು ಅವಳು ತಮಗಿಂತ ತುಂಬಾ ಕೀಳು ಎನ್ನುವ ಅರಿವನ್ನು ಅವಳಲ್ಲಿ ಸದಾ ಜಾಗೃತವಾಗಿರುವಂತೆ ಎಚ್ಚರಿಕೆ ವಹಿಸುತ್ತಾರೆ.

ನೀವು ಎಂದಾದರೂ ಈ ಜನಗಳ ಬದುಕಿನಲ್ಲಿ ಇಣುಕಿ ನೋಡಿದ್ದೀರಾ? ಈ ಒಂದು ವರ್ಗದ ಮಹಿಳೆಯರ ಸ್ಥಿತಿಗತಿ ಯಾರೂ ಊಹಿಸುವಷ್ಟು ಕಂಡು ಕೇಳರಿಯದಷ್ಟು ವಿಚಿತ್ರವಾಗಿರುತ್ತವೆ. ಇಲ್ಲಿ ಹೆಣ್ಣುಗಳು ಅನವರತ ಶೋಷಣೆಗೆ ಬದುಕಿನುದ್ದಕ್ಕೂ ಒಳಗಾಗುತ್ತಿರುತ್ತಾರೆ ಮತ್ತು ಅವರು ಅದನ್ನು ಉಸಿರಾಡುವಷ್ಟು ಸಹಜವಾಗಿ ಸ್ವೀಕರಿಸುತ್ತಾರೆ. ಈ ವರ್ಗದ ಗಂಡಸರು ಸಾಮಾನ್ಯವಾಗಿ ಪೋಕರಿಗಳೂ ದುರ್ವ್ಯಸನಿಗಳೂ ಆಗಿರುತ್ತಾರೆ. ಮಧ್ಯಮ ವಿದ್ಯಾವಂತ ಮನೆಗಳಲ್ಲಿರುವ 'ಗಂಡಸು ದುಡಿದು ಸಂಸಾರ ಸಾಕಬೇಕೆನ್ನುವ' ಜನ ಒಪ್ಪಿತ ನಿಯಮ ಇವರಿಗನ್ವಯವಾಗುವುದೇ ಇಲ್ಲ. ಈ ವರ್ಗದ ಹೆಂಗಸರು ನೂರಕ್ಕೆ ತೊಂಬತ್ತೈದು ಮಂದಿ ಹುಡುಗಿಯಾಗಿದ್ದಾಗಿನಿಂದ ತೀರಾ ಮರಣದ ಮುನ್ನ ಕಾಯಿಲೆಯಾಗುವವರೆಗೆ ತಮ್ಮ ತುತ್ತಿನ ಚೀಲವನ್ನು ತಾವೇ ದುಡಿದು ತುಂಬಿಸಬೇಕು. ಕುಡಿತ ಈ ಜನರ ಗಂಡಸರನ್ನು ಸತತ ಕಾಡುವ ಚಟ. ತಾವು ದುಡಿದದ್ದನ್ನು ಕುಡಿತಕ್ಕೆ ಹಾಳು ಮಾಡುವುದೇ ಅಲ್ಲದೆ ತಮ್ಮ ಹೆಂಡತಿಯರ ಗಳಿಕೆಯನ್ನು ಮದಿರೆಗೆ ಸುರಿಯುವ ವೀರರಿದ್ದಾರೆ ಇವರಲ್ಲಿ. ಪ್ರತಿಭಟಿಸಿದರೆ ಹೆಣ್ಣಿಗೆ ಹೊಡೆತ ಬಡೆತ ತೀರಾ ಸಾಮಾನ್ಯ ಸಂಗತಿ. ಹೆಂಡತಿಯ ಹಲ್ಲುಮುರಿದವರೂ, ಕೈಕಾಲು ಮೂಳೆ ಮುರಿದ ವೀರಾಧಿವೀರರು ಹೇರಳವಾಗಿ ಸಿಗುತ್ತಾರೆ. ಕುಡಿತವೇ ಅಲ್ಲದೆ ಬಹುಪತ್ನಿತ್ವ ಸಹ ಈ ವರ್ಗದ ಗಂಡಸರಿಗೆ ಸಾಮಾಜಿಕ ಮರ್ಯಾದೆಯ ವಿಚಾರ. ತನ್ನ ಆರ್ಥಿಕ ಸ್ಥಿತಿ ಮತ್ತು ಮದುವೆಗೆ ಮಧ್ಯಮ ವರ್ಗದಲ್ಲಿರುವಂತೆ ನಂಟಿಲ್ಲ. ತನಗೇ ತಿನ್ನಲು ಗತಿಯಿಲ್ಲದವನೂ ಎರಡು ಮೂರು ಮದುವೆಗಳನ್ನು ಮಾಡಿಕೊಳ್ಳಬಲ್ಲ. ಬದಲಿಗೆ ಆ ಮೂರು ಹೆಂಡತಿಯರೂ ದುಡಿಯುವುದರಿಂದ ಅವನ ಆರ್ಥಿಕ ಸ್ಥಿತಿ ಉತ್ತಮವಾಯಿತೆಂದೇ ಅವನ ನಂಬಿಕೆ.

ಲಕ್ಕಮ್ಮ ಒಬ್ಬ ಮನೆಗೆಲಸದಾಕೆ. ಇವಳ ಗಂಡ ಏಳು ಮದುವೆಗಳನ್ನು ಮಾಡಿಕೊಂಡಿದ್ದಾನೆ ಮತ್ತು ಅವನಿಗೆ ಯಾವ ಕೆಲಸವೂ ಇಲ್ಲ. ಒಂದು

ತುಂಡು ಜಮೀನೇನೋ ಇದೆ. ಅದರಲ್ಲಿ ಬೇಸಾಯ ಮಾಡದಂತಹ ಸೋಮಾರಿತನವೂ ಇವನಲ್ಲಿದೆ. ಹಳ್ಳಿಯಲ್ಲೊಂದು ಮನೆ ಬೆಂಗಳೂರಿನಲ್ಲಿ ಲಕ್ಕಮ್ಮನ ಗುಡಿಸಲು. ಅಲ್ಲಿ ಬೇಸರವಾದರೆ ಇಲ್ಲಿ ಇಲ್ಲಿ ಬೇಸರ ವಾದರೆ ಅಲ್ಲಿ ಎಡತಾಕಿಕೊಂಡು ಎಲ್ಲ ಹೆಂಡತಿಯರ ಮೇಲೂ ಜೋರು ಮಾಡಿಕೊಂಡು ಜೀವಿಸುತ್ತಿರುವ ಧೀರ. ಅವನಿಂದ ಲಕ್ಕಮ್ಮ ಪಡುವಪಾಡು ಅಷ್ಟಿಷ್ಟಲ್ಲ. ಅವಳಿಗೆ ನಾಲ್ಕು ಮಕ್ಕಳಿದ್ದಾರೆ. ಎರಡು ಹೆಣ್ಣು, ಎರಡು ಗಂಡು. ದೊಡ್ಡ ಮಗಳಿಗೆ ಇದೇ ಮನೆಗೆಲಸದ ದುಡಿಮೆಯಲ್ಲೇ ಉಳಿಸಿ ಮದುವೆ ಮಾಡಿದ್ದಾಳೆ. ಉಳಿದ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದಾಳೆ. ಆದರೆ ಜೀವನ ಸುಗಮವಾಗಲು ಗಂಡ ಮಹಾರಾಯ ಬಿಡಬೇಕಲ್ಲ! ಎರಡು ಮೂರು ತಿಂಗಳಿಗೊಮ್ಮೆ ಬಿರುಗಾಳಿಯಂತೆ ನುಗ್ಗುತ್ತಾನೆ. ಇವಳು ಮನೆಗೆಲಸಕ್ಕೆ ಬಂದಾಗ ಅಲ್ಲಲ್ಲಿ ಬಚ್ಚಿಟ್ಟ ಪುಡಿಗಾಸು ಗಳನ್ನು ಅಧಿಕಾರಯುತವಾಗಿ ಅಪಹರಿಸುತ್ತಾನೆ. ಏನೂ ಸಿಕ್ಕದಿದ್ದರೆ ಅವಳ ಅಡಿಗೆ ಮನೆಯ ನಾಲ್ಕೋ ಆರೋ ಪಾತ್ರೆ ಪರಿಡಿಗಳು ಸೀದಾ ಗಿರವಿ ಅಂಗಡಿಗೆ ಹೋಗುತ್ತವೆ. ಮರುದಿನ ಅಡುಗೆ ಬೇಯಿಸಬೇಕಾದರೆ ಲಕ್ಕಮ್ಮ ತಾನು ಕೆಲಸ ಮಾಡುವ ಮನೆಯೊಡತಿಯರ ಹತ್ತಿರ ಸಾಲ ಮಾಡಿ ಗಿರವಿ ಅಂಗಡಿಗೆ ಪಾಲಾದ ಪಾತ್ರೆಗಳನ್ನು ಬಿಡಿಸಿ ತರಬೇಕು. ಇದನ್ನೆಲ್ಲಾ ಉಸಿರಾಡುವಷ್ಟು ಸಲೀಸಾಗಿ ಸ್ವೀಕರಿಸುವ ಲಕ್ಕಮ್ಮ ನಗುತ್ತಾ ಹೇಳುತ್ತಾಳೆ "ಹಾಗೆ ಅಮ್ಮ, ನಮ್ಮನೆ ಪಾತ್ರೆ ಗಳಿಗೆ ಆಗಾಗ್ಗೆ 'ವಾಕಿಂಗ್' ಹೋಗುವ ಚಟ".

ಒಮ್ಮೆ ಈ ಪತಿದೇವ ತನ್ನ ಹೊಸ 'ಹಳ್ಳಿ ಹೆಂಡತಿ'ಯನ್ನು ಇವಳ ಮನೆಗೆ ಕರೆ ತಂದು ಹುಕುಂ ಮಾಡಿದ "ಇವಳಿಗೆ ಬೆಂಗಳೂರು ತೋರಿಸು ಮತ್ತು ಹೊಸದೊಂದು ಸೀರೆ ಉಡುಗೊರೆ ಕೊಡು" ಮೌನ ವಾಗಿ ಎಲ್ಲವನ್ನು ನಡೆಸಿದಳು. ಇಲ್ಲದಿದ್ದರೆ ಒದ್ದು ಕೈಯನ್ನೋ ಕಾಲನ್ನೋ ಮುರಿದು ಹಾಕುತ್ತಾನೆ ಅವಳು ಹೇಳುತ್ತಾಳೆ: "ನನ್ನ ಕೈ ಕಾಲು ಗಟ್ಟಿಯಿರು ವುದರಿಂದ ನಾಲ್ಕು ಮನೆ ಎಂಜಲು ತೊಳೆದಾದರೂ ಮಕ್ಕಳನ್ನು ಸಾಕುತ್ತೇನೆ ಅಮ್ಮ. ಅವನು ಅದನ್ನು ಮುರಿದು ಹಾಕಿದರೆ ಏನು ಮಾಡಲಿ" ಶೋಷಣೆ ಎನ್ನುವ ಶಬ್ದವೂ ತನ್ನ ಮಿತಿಗೆ ನಾಚಿಕೊಳಬೇಕು! ಲಕ್ಕಮ್ಮನ ಸ್ಥಿತಿಯನ್ನು ಖಂಡಿತಾ ಈ ಶಬ್ದ ವಿವರಿಸಲಾರದು. "ಇಷ್ಟೆಲ್ಲಾ ಆದರೂ ನೀನು ಅವನನ್ನು ಯಾಕೆ ಮನೆಗೆ ಸೇರಿಸುತ್ತೀಯ ಬಿಟ್ಟುಬಿಡು ಅವನನ್ನು" ಎಂದರೆ ನಿಟ್ಟುಸಿರುಬಿಡುತ್ತಾ ಅನ್ನುತ್ತಾಳೆ "ಏನು ಮಾಡುವುದು ಅಮ್ಮ, ಎಷ್ಟಾದರೂ ಅವನು ಗಂಡ ಅಲ್ವಾ, ತಾಳಿಕಟ್ಟಿದ್ದಾನೆ ನನಗೂ ಗಂಡಿನ ಆಧಾರಬೇಕಲ್ಲ" ಅವಳ ನಿಟ್ಟುಸಿರು ಅವಳ ಮತ್ತು ಅವಳಂತಹವರ ಅನಂತ ಕತೆಯನ್ನು ಮೌನವಾಗಿ ಬಿತ್ತರಿಸುತ್ತದೆ 'ಗಂಡಿನ ಆಧಾರಬೇಕಲ್ಲ' ಎನ್ನುವಾಗ ಮಿಂಚುವ ಅವಳ ಕಣ್ಣುಗಳು ಬದುಕಿನ ಅಗತ್ಯತೆಯನ್ನು ಬಿಂಬಿಸುತ್ತವೆ.

ಲಕ್ಷ್ಮಿಯ ಬದುಕು ಮತ್ತೊಂದು ಪ್ರಪಂಚವನ್ನು ತೆರೆದು ತೋರಿಸುತ್ತದೆ. ಮೊದಲು ಅಣ್ಣನಿಂದ ನಂತರ ಗಂಡನಿಂದ ಶೋಷಿತಳಾಗಿ ಈಗವಳ ಬಾಳು ಒಂಟಿ ಎತ್ತಿನಂತಾಗಿದೆ. ನಾಲ್ಕಾರು ಮನೆ ಕೆಲಸದಿಂದ ಅಷ್ಟೋ ಇಷ್ಟೋ ಗಳಿಸುತ್ತಿದ್ದ ಗಳಿಕೆಗೆ ಅಣ್ಣ ಯಜಮಾನನಾಗಿದ್ದ. ಹೊಡೆದು ಬಡಿದೂ ಹಣ ಕೀಳುತ್ತಿದ್ದ. ಇದರಿಂದ ಮುಕ್ತಿ ಎನ್ನುವಂತೆ ಅವಳಿಗೆ ಮದುವೆಯಾಯಿತು. ಆದರೇನು ಕಾವಲಿಯಿಂದ ಸೀದಾ ಕೆಂಡಕ್ಕೇ ಬಿದ್ದ ಸ್ಥಿತಿ! ಮದುವೆಯಾದ ಎರಡೇ ದಿನಕ್ಕೆ ಆ ಗಂಡನೆನ್ನುವ ಮಹಾನುಭಾವ ಇವಳ ಅತ್ತಿಗೆಯ ಸಾವಿರಾರು ರೂ. ಬೆಲೆ ಬಾಳುವ ಹರಳಿನೋಲೆಯನ್ನು ಕದ್ದು ಪರಾರಿಯಾದ. ಮದುವೆ ಯಾದರೂ ಮತ್ತೆ ಅಣ್ಣನ ಮನೆಯೇ ಗತಿಯಾದ ಲಕ್ಷ್ಮಿಗೆ ದುಡಿತದಲ್ಲಿ ಉಳಿಸಿ ಅತ್ತಿಗೆಯ ಓಲೆಗೆ ಸಾಲ ತೀರಿಸುವ ಹೊಣೆ ಬೇರೆ. ಸಿಕ್ಕಾಪಟ್ಟೆ ಕುಡಿತದ ಚಟ ವಿರುವ ಗಂಡ ಮತ್ತೆ ಬಂದರೂ ಮನೆ ಸೇರಿಸಿಲ್ಲ ಅವಳು. "ಕದಿಯುವ ಕುಡಿಯುವ ಇವನನ್ನು ಹೇಗೆ ನಂಬಲಿ" ಎನ್ನುವ ಅವಳಿಗೂ ಒಂದು ಕನಸಿದೆ. ಒಂದಲ್ಲ ಒಂದು ದಿನ ನನ್ನ ಗಂಡನಿಗೆ ಬುದ್ಧಿ ಬಂದೀತು. "ಅವನು ಕುಡಿತ ಬಿಟ್ಟು ನನ್ನ ಮನೆಗೆ ಬರಲಿ ಅವನು ದುಡಿಯುವುದೇ ಬೇಡ ನಾನೇ ಅವನನ್ನು ಸಾಕುತ್ತೇನೆ" ಎನ್ನುವ ಅವಳ ಆಕಾಂಕ್ಷೆ ಪೂರೈಸುವುದೇ ಅವಳ ವಿಧಿ? ಕಾದು ನೋಡಬೇಕು.

ಈ ಮಹಿಳಾ ವರ್ಗದ ಬವಣೆಗಳನ್ನು ಯಾರೂ ಕೇಳುವವರಿಲ್ಲ. ಇಂಥ ಲಕ್ಕಮ್ಮ ಇಂಥ ಲಕ್ಷ್ಮಿಯರು ನೂರಾರು, ಸಾವಿರಾರು ಮಂದಿಯರಿದ್ದಾರೆ. ಇವರದೇ ಆದ ಸಂಘಟನೆಗಳಿಲ್ಲ. ಸರ್ಕಾರಕ್ಕಂತೂ ಇವರ ಬಗ್ಗೆ ಯೋಚಿಸಲೂ ಪುರುಸೊತ್ತಿಲ್ಲ. ಇವರ ಅವಶ್ಯಕತೆ ಗಳು ಯಾವ 'ಲೇಬರ್ ಲಾ' ಅಡಿಯಲ್ಲೂ ಬರುವು

ದಿಲ್ಲ. ಖಾಯಿಲೆ, ಕಸಾಲೆಯೆಂದು ಎಂಟು ಹತ್ತು ದಿನ ಕೆಲಸಕ್ಕೆ ಚಕ್ಕರ್‌ಗಳನ್ನು ಹಾಕಿದರೆ ನಂತರ ಹೋದಾಗ ಇವರು ಕೆಲಸ ಮಾಡುವ ಮನೆಗಳಲ್ಲಿ ಮತ್ತೊಬ್ಬಳು ಪ್ರತಿಷ್ಠಾಪಿತಗಳಾಗಿರುತ್ತಾಳೆ. ಇವರೂ ಧೈರ್ಯ ಗೆಡದೆ ಮತ್ತು ಮನೆಗಳನ್ನು ಹುಡುಕುತ್ತಾ ಹೊರಡುತ್ತಾರೆ. ಇವರಿಗೆ ಸಿಗುವ ಭತ್ಯೆಗಳೂ ಅಷ್ಟೆ ಒಂದೊಂದು ಮನೆಯಲ್ಲಿ ಒಂದೊಂದು ರೇಟು ! ಹಿಂದೆ ನ್ಯಾಯವಾದಿ ಮಹಿಳೆಯೊಬ್ಬರು ಈ ಮಹಿಳೆಯರಿಗಾಗಿ ಸಂಘ ಕಟ್ಟುವ ಮಾತನಾಡಿದ್ದರು. ಇವರ ಭತ್ಯೆ ಇತ್ಯಾದಿಗಳಿಗೆ ನಿಯಮ ರೂಪಿಸುವ ಭರವಸೆ ನೀಡಿದ್ದರು. ಅದೊಂದು ಸುದ್ದಿಯಾಗಿತ್ತು. ಮಹಾರಾಷ್ಟ್ರದಲ್ಲಿ ಇಂತಹ ಪ್ರಯತ್ನಗಳು ನಡೆದಿವೆಯಾದರೂ ಅದು ಇನ್ನೂ ವ್ಯಾಪಕತೆಯನ್ನು ಪಡೆದಿಲ್ಲ. ಇಷ್ಟಾದರೂ ಈ ಹೆಂಗಸರು ದಿಟ್ಟೆಯರು. ಮಧ್ಯಮ ವರ್ಗದ ವಿದ್ಯಾವಂತ ಹೆಣ್ಣುಗಳ ಹಾಗೆ ಕಷ್ಟಗಳಿಗೆ ಕುಸಿಯುವವರು ಅಂಜುಬುರುಕಿಯರ ಹಾಗೆ ಅಳುತ್ತಾ ಕೂಡುವವರೂ ಅಲ್ಲ. ವಿಪತ್ತುಗಳನ್ನು ರಘಾಡಿಸಿಕೊಂಡು ಬದುಕುವ ಕಲೆ ಇವರಿಗೆ ಕರತಲಾಮಲಕ. ಮನುವಿನ ವಾಣಿ ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ ಮಗ ಹೆಣ್ಣನ್ನು ಸಾಕಬೇಕು ಎನ್ನುವುದರ ಆಚೆಯೇ ಉಳಿಯುವವರು. ಈ ದೃಷ್ಟಿಯಿಂದ ಗಂಡಿನ ಹಂಗಿಲ್ಲದೇ ಬದುಕುವವರು 'ತಮ್ಮ ಕೈ ತಮ್ಮ ತಲೆಗೆ' ಎನ್ನುವ ದುಡಿತದ ಬೀಜ ಮಂತ್ರ ನಂಬಿರುವವರು.

'ಇವರಿಲ್ಲದೆ ಬದುಕಿಲ್ಲ' ಎಂದು ನಮ್ಮ ಗೃಹಿಣಿಯರು ಅಂದುಕೊಳ್ಳುವಂಥ ಅನಿವಾರ್ಯತೆಯ ನಡುವೆಯೂ, ವಾಕ್ಯೂಮ್ ಕ್ಲೀನರ್, ವಾಷಿಂಗ್ ಮಿಷನ್‌ಗಳ ಜೊತೆಯಲ್ಲೇ ಹೊಂದಾಣಿಕೆ ಮಾಡಿಕೊಳ್ಳುತ್ತಾ ಬದುಕುತ್ತಿರುವ ಈ ವರ್ಗಕ್ಕೊಂದು ಚೆಂದದ ಬದುಕಿಲ್ಲ ಎನ್ನುವುದು ಎಂಥ ನೋವಿನ ಸಂಗತಿ. ●

## "ಅಂದು ಮನೆಗೆಲಸ—ಇಂದು ಪ್ರೊಫೆಸರ್ !"

ಗುಜರಾತಿನ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿರುವ ಮಹಿಳೆಯೊಬ್ಬರು ಬಾಲ್ಯದಲ್ಲಿ ತಾಯಿಯೊಂದಿಗೆ ಮನೆಗೆಲಸ ಮಾಡಲು ಹೋಗುತ್ತಿದ್ದರಂತೆ. ಅವರು ಹೇಳುತ್ತಾರೆ : "ನಾವು ಗುಡಿಸಿಲಲ್ಲಿ ವಾಸಿಸುತ್ತಿದ್ದೆವು. ನಾನು ನನ್ನ ಅಕ್ಕ ಅಮ್ಮನಿಗೆ ಸಹಾಯ ಮಾಡಲು ಅಮ್ಮ ಕೆಲಸ ಮಾಡುವ ಮನೆಗಳಿಗೆ ಹೋಗಿ ಒಗೆದ ಬಟ್ಟೆಗಳನ್ನು ಒಣಗಲು ಹಾಕುವುದು ಕಸ ಗುಡಿಸಿ ಸಾರಿಸುವುದು ಇತ್ಯಾದಿ ಮಾಡುತ್ತಿದ್ದೆವು. ನಮಗೆ ಚಹಾ ಕುಡಿಯಲು ಯಾವಾಗಲೊಮ್ಮೆಯಾದರೂ ಆಸೆಯಾದರೆ ನಮ್ಮ ತಾಯಿ ಕೆಲಸದ ಮನೆಯವರು ಚಹಾ ಮಾಡಿ ಕುಡಿದು ಎಂಜಲು ಪಾತ್ರೆ ಜೊತೆ ಎಸೆಯಲು ಇಟ್ಟ ಚರಟವನ್ನು ಸೆರಗಿನಲ್ಲಿ ಕಟ್ಟಿ ತರುತ್ತಿದ್ದರು. ಅದಕ್ಕೇ ನೀರು ಹಾಕಿ ಕುದಿಸಿ ಚಹಾ ಮಾಡಿ ಕುಡಿಯುತ್ತಿದ್ದೆವು. ಅದಕ್ಕೆ ಹಾಲಿರಲಿಲ್ಲ. ರುಚಿಗೆ ಒಂದು ಚೂರುಬೆಲ್ಲ ಅಷ್ಟೇ. ನನಗೆ ಓದುವ ಬರೆಯುವ ಆಸೆ ಬಹಳವಿತ್ತು. ಶಾಲೆಯ ಹೊರಗೆ ನಿಂತು ಮಕ್ಕಳು ಒಟ್ಟಾಗಿ ಹೇಳುವ ಮಗ್ಗಿಯನ್ನೋ, ಪದ್ಯವನ್ನೋ ನಾನೂ ಬಾಯಿ ಪಾಠ ಮಾಡಿ ಕೊಳ್ಳುತ್ತಿದ್ದೆ. ಅಮ್ಮ ನನ್ನ ಉತ್ಸಾಹ ನೋಡಿ ಕೊನೆಗೆ ತನ್ನಂತೆ ಮಗಳೂ ಮನೆ ಕೆಲಸದವಳಾಗಬಾರದೆಂದು ಸರ್ಕಾರಿ ಶಾಲೆಗೆ ಸೇರಿಸಿದಳು. ನಾನು ಪ್ರೌಢಶಾಲೆ ಮತ್ತು ಜ್ಯೂನಿಯರ್ ಕಾಲೇಜಿನಲ್ಲಿ ಓದುವವರೆಗೆ ಅಮ್ಮನಿಗೆ ಮನೆಗೆಲಸದದಲ್ಲಿ ಸಹಾಯಕಳಾಗಿದ್ದೆ ನಂತರ ಮನೆ ಪಾಠ ಹೇಳಲು ಪ್ರಾರಂಭಿಸಿದೆ."

ಈಗ ಈಕೆ ಎಂ.ಎ. ಎಂ.ಫಿಲ್. ಪಿ.ಎಚ್.ಡಿ.ಗಳನ್ನು ಮುಗಿಸಿ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿದ್ದಾರೆ. ಯಾವ ಅಳುಕೂ ಇಲ್ಲದೆ ಗತಜೀವನನವನ್ನು ನೆನಪು ಮಾಡಿಕೊಳ್ಳುತ್ತಾರೆ. ಕಾರು ಬಂಗಲೆ ಇತ್ಯಾದಿ ಎಲ್ಲ ಸೌಲಭ್ಯವನ್ನು ತನ್ನ ಸ್ವತಃ ಸಂಪಾದನೆಯಿಂದ ಗಳಿಸಿದ್ದರೂ ತಮ್ಮ ಹಳೆಯ ಗುಡಿಸಲು ವಾಸ ಮರೆತಿಲ್ಲ. ಇವರ ವಿದ್ಯಾರ್ಥಿ–ವಿದ್ಯಾರ್ಥಿನಿಯರಂತೂ ಇವರನ್ನು ತಮ್ಮ ಆದರ್ಶ, ಮಾರ್ಗದರ್ಶಿ ಎಂದೇ ಭಾವಿಸುತ್ತಾರೆ. ಇಂಥ ಪ್ರತಿಭಾನ್ವಿತ ಮೇಡಂರವರ ವಿದ್ಯಾರ್ಥಿಗಳಾಗಿರುವುದೇ ನಮ್ಮ ಪುಣ್ಯ ಎನ್ನುತ್ತಾರೆ.

ಆದ್ದರಿಂದ ಮನೆಗೆಲಸ ಮಾಡುವ ಪುಟ್ಟ ಮಕ್ಕಳೇ ಗಮನಿಸಿ, ಮನಸ್ಸೊಂದಿದ್ದರೆ ಸಾಯುವವರೆಗೂ ಇದಕ್ಕೇ ಅಂಟಿಕೊಳ್ಳಬೇಕಾಗಿಲ್ಲ. ಪ್ರಯತ್ನವೊಂದು ದೃಢವಾಗಿದ್ದರೆ ಏನನ್ನೂ ಸಾಧಿಸಬಹುದು. ●

# ಇಲ್ಲಿ ನೋಡಿ ಚರಿತ್ರೆ ನಿರ್ಮಿಸಿದ ಭಾರತೀಯ ವಿಮಾನ ಚಾಲಕಿಯರನ್ನು

★ ನೇಮಿ

ಸುಷ್ಮಿತಾ ಸೇನ್, ಐಶ್ವರ್ಯ ರಾಯ್ ಯಾರು ಅಂತ ಕೇಳಿ, ಸಾಮಾನ್ಯ ದಾರಿಹೋಕನೂ ಉತ್ತರಿಸಬಲ್ಲ. ಬರೀ ಹೆಸರಷ್ಟೇ ಪರಿಚಯವಲ್ಲ, ಸಾವಿರ ಚಹರೆಗಳ ನಡುವೆ ಚಿರಪರಿಚಿತವಾದ ಇವರ ಮುಖಗಳು ಎದುರು ನಿಲ್ಲುತ್ತವೆ. ನಮ್ಮ ಪತ್ರಿಕೆಗಳು, ಜಾಹಿರಾತುಗಳು, ದೂರದರ್ಶನ ಏನೆಲ್ಲ ಮಾಧ್ಯಮಗಳಿಂದ ಎಡೆಬಿಡದೆ ತೂರಿಬಂದ ಇನ್ನೂ ಬರುತ್ತಿರುವ 'ಆಹಾ, ಓಹೋ' ಉದ್ಗಾರಗಳು, ಅದೇ 'ಪ್ರಿಯಾ ನಾಲ್ಗುಂಡ್ವರ್ ಯಾರು ?' ಅಂತಾ ಕೇಳಿ, ಕಣ್ಣು ಕಣ್ಣು ಬಿಡುತ್ತಾರೆ.

ಭಾರತದ ಮಹಿಳೆಯರು ವಿಶ್ವ ಸುಂದರಿ, ಜಗತ್ ಸುಂದರಿ ಪಟ್ಟ ಪಡೆದದ್ದು ಸಂತೋಷದ ವಿಷಯ. ಆದರೆ ಅದಕ್ಕಿಂತ ಹೆಚ್ಚು ಹೆಮ್ಮೆ ಪಡಬೇಕಾದದ್ದು ಪ್ರಿಯಾ ನಾಲ್ಗುಂಡ್ವರ್ ಅಂಥಾ ಯುವತಿಯರು ಮೊಟ್ಟ ಮೊದಲಿಗೆ ಮಹಿಳೆಯರಿಗೆ ಬಾಗಿಲು ತೆರೆದ ಸೇನೆಯೊಳ ನುಗ್ಗಿ, ವಾಯುಪಡೆಯ ವಿಮಾನ ಚಾಲಕಿಯರಾಗಿ ಪುರುಷರಿಗೆ ಸರಿಸಮಾನವಾಗಿ ನಿಂತು ತರಪೇತುಗೊಂಡುದಲ್ಲದೆ ಪ್ರಶಸ್ತಿ, ಪುರಸ್ಕಾರವನ್ನೂ ಪಡೆದಿರುವುದು. 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯು ಸಂಪಾದಕೀಯವೊಂದರಲ್ಲಿ 'ವಿಶ್ವ ಸುಂದರಿ ಸುಷ್ಮಿತಾ ಸೇನ್ ಆಕರ್ಷಕ ವ್ಯಕ್ತಿತ್ವದ ಯುವತಿ ನಿಜ. ಆದರೆ ವಿಶ್ವ ಸುಂದರಿ ಕಿರೀಟ ಹೊತ್ತೊಡನೆ ಇಷ್ಟೆಲ್ಲಾ 'ಫಸ್' ಮಾಡುವ ಅಗತ್ಯ ಇದೆಯೇ, ಅಂಥಾ ಅರ್ಹತೆ ಅವರಿಗಿದೆಯೆ? ಎಂದಿದೆ. ನಮ್ಮಲ್ಲಿಯೂ ಇತ್ತೀಚೆಗೆ ಎಲ್ಲವನ್ನೂ ವಿಪರೀತವಾಗಿ ಉತ್ಪ್ರೇಕ್ಷಿಸಿ ಪ್ರಕಟಿಸುವ, ಪ್ರದರ್ಶಿಸುವ ಸಂಸ್ಕೃತಿ ಯತೇಚ್ಛವಾಗುತ್ತಿದೆ. ಇಂದಿನ ಜಾಹಿರಾತು ಸಂಸ್ಕೃತಿಯಲ್ಲಿ ಇರುವೆ ಗುಡ್ಡವನ್ನೂ ಬೆಟ್ಟವಾಗಿ, ಹಿಮಾಲಯವಾಗಿ ಬಿತ್ತರಿಸುವುದು ಅಭ್ಯಾಸವಾಗಿದೆ. ಸುಷ್ಮಿತಾ ಸೇನ್ ಮೇಲೆ ಸುರಿಯುತ್ತಿರುವ ಅತಿರೇಕದ, ವಿಪರೀತದ ಪ್ರಶಂಸೆ, ಜನರ ಕೇವಲ ಮನೋರಂಜನೆಯತ್ತಲದ ಪೂರ್ವಾಕ್ರಮವನ್ನೇ ಪ್ರೋತ್ಸಾಹಿಸುತ್ತದೆ. ಈ ಸೌಂದರ್ಯ ಸ್ಪರ್ಧೆಗಳು ದೂರದರ್ಶನದ ಜಾಹಿರಾತು ಹಾಗೂ ಮನೋರಂಜನಾ ಕಾರ್ಯಕ್ರಮಗಳ ಸಹಾಯದಿಂದ ಹಿಗ್ಗುತ್ತಿರುವ ಬಂಡವಾಳಶಾಹಿ ಗ್ರಾಹಕ ಪ್ರವೃತ್ತಿಯನ್ನು ಬೆಂಬಲಿಸುವ ಮಾರಾಟದ ತಂತ್ರಗಳು. ಈ ಗ್ರಾಹಕ ಜಗತ್ತಿಗೂ ಭಾರತದ ದೊಡ್ಡ ಸತ್ಯಗಳಾದ ಬಡತನ, ಕೊಲೆ ಸುಲಿಗೆ, ಮಹಿಳೆಯರ ಶೋಷಣೆ, ದುರ್ಬಲರ ದಮನ, ಮಾನವ ಹಕ್ಕುಗಳ ಉಲ್ಲಂಘನೆ ಇವು ಯಾವುದಕ್ಕೂ ಸಂಬಂಧವಿಲ್ಲ. ಇಂಥಾ ವೈಭವದ ಕಾರ್ಯಕ್ರಮಗಳು ಏನಿದ್ದರೂ ಮಧ್ಯಮವರ್ಗದ ಜನಸಂಖ್ಯೆಯ ಗಮನವನ್ನು ವಾಸ್ತವದಿಂದ ದೂರವಿಡುವಂಥಹವು.

ಸೌಂದರ್ಯ ಸ್ಪರ್ಧೆಯ ವಿಜೇತರಿಗೆ ನೀಡುವ ಇಂಥಾ ಬಾರೀ ಉತ್ಪ್ರೇಕ್ಷೆಯ ಪ್ರಚಾರ, ಇತರೆ ರಂಗಗಳಲ್ಲಿ ಗುರುತರ ಸಾಧನೆಯನ್ನು ಮಾಡಿದ ಮಹಿಳೆಯರಿಗೆ ನಮ್ಮ ಮಾಧ್ಯಮಗಳು ನೀಡುವ ಉಪೇಕ್ಷೆಯೊಡನೆ ಎದ್ದು ಕಾಣುತ್ತದೆ. ಈ ಎಲ್ಲ ಸೌಂದರ್ಯ ಸ್ಪರ್ಧೆಗಳ ಗಲಾಟೆಯ ನಡುವೆ ಏಳು ಮಂದಿ ಎಳೆಯ ಯುವತಿಯರು ಭಾರತದ ವಾಯುಪಡೆಯಲ್ಲಿ ಮೊಟ್ಟ ಮೊದಲ ಮಹಿಳಾ ವಿಮಾನ ಚಾಲಕರಾಗಿ ಚರಿತ್ರೆ ನಿರ್ಮಿಸಿದರು. ಅವರತ್ತ ನಮ್ಮ ಪತ್ರಿಕೆಗಳ ಗಮನ ಹರಿದದ್ದು ಅತ್ಯಂತ ಕಡಿಮೆ. ನಮ್ಮಲ್ಲಿ ಅಧಿಕ ಸಾಧನೆಯ ಮಹಿಳಾ ವಿಜ್ಞಾನಿಗಳಿದ್ದಾರೆ, ತಂತ್ರಜ್ಞಾನಿಗಳಿದ್ದಾರೆ, ಲೇಖಕಿಯರಿದ್ದಾರೆ–ಇವರತ್ತಲ ನಮ್ಮ ಮಾಧ್ಯಮಗಳ ಗಮನ ಹರಿದಿರುವುದು ತೀರಾ ಸ್ವಲ್ಪ. ಎಲ್ಲಿಯೋ ಮಹಿಳೆಗೆ ದೈಹಿಕ ಸೌಂದರ್ಯವೇ ಅತಿ ಮುಖ್ಯ ಎಂಬ ಸಂದೇಶವನ್ನು ನೀಡುತ್ತಿಲ್ಲವೆ ? ಸುಷ್ಮಿತಾ ಸೇನ್‌ಗೆ ಕಿರೀಟ ಕೊಟ್ಟದ್ದು ಕೇವಲ ದೈಹಿಕ ಸೌಂದರ್ಯಕ್ಕಲ್ಲ, ಆಕೆಯ ಬುದ್ಧಿವಂತಿಯನ್ನೂ ಗಮನಿಸಿ ನೀಡಿದರು ಎನ್ನುವ ವಾದಗಳು ನಂಬುವಂಥವವಲ್ಲ. ಆಕೆಯ ಸ್ಪರ್ಧೆಯ ನ್ಯಾಯಾಧೀಶರು ಬುದ್ಧಿವಂತಿಕೆಯನ್ನು ಅಳೆಯುವ ತಜ್ಞರೇನಿರಲಿಲ್ಲ. ಅವರು ಕೇಳಿದ ಕೆಲವು ಪ್ರಶ್ನೆಗಳಿಂದ ಆಕೆಯ ಬುದ್ಧಿವಂತಿಕೆಯನ್ನು ಅಳೆಯುವಂತೂ ಇರಲಿಲ್ಲ. ಸುಷ್ಮಿತಾ ಸೇನ್ ಬುದ್ಧಿವಂತಳೂ

ಆಗಿದ್ದರೆ ಅದು ಕಾಕತಾಳೀಯ. ಕಾರಣ, ದಪ್ಪಗೆ, ಕುಳ್ಳಗೆ. ಮೆಳ್ಳಗಣ್ಣಿನ ಅತಿ ಬುದ್ಧಿವಂತೆ ವಿಶ್ವ ಸುಂದರಿ ಆಗಲು ಸಾಧ್ಯವಿದೆಯೆ ?' ಎನ್ನುವ ಸಂಪಾದಕರ ಮಾತುಗಳು ಗಮನೀಯ. ಹಲವು ಹತ್ತು ರಂಗಗಳ ಮಹಿಳೆಯರತ್ತ ಗಮನ ಸೆಳೆಯದೆ ಕೇವಲ ಮಹಿಳೆಯರ ಉಡುಪು. ವೈಯ್ಯಾರ, ಸೌಂದರ್ಯ ಇಷ್ಟನ್ನೇ ಹಾಡಿ ಹೊಗಳುವ, ಎಲ್ಲಿಲ್ಲದ ಪ್ರಚಾರ ನೀಡುವ ಈ ಸಂಸ್ಕೃತಿಯಲ್ಲಿ ಹುಡುಗಿಯರು ಕೇವಲ ಅಂದಚಂದದತ್ತ ಮಾತ್ರ ಗಮನ ಹರಿಸಿ, ತಮ್ಮ ಸಾಮರ್ಥ್ಯ, ಸಾಧನೆಯ ಹಲವು ಹತ್ತು ಹಾದಿಗಳಿಂದ ದೂರವಾಗುತ್ತಾರೇನೋ ಎಂಬ ಅನುಮಾನ.

ಸುಷ್ಮಿತಾ ಸೇನ್ ಕಿರೀಟ ಹೊತ್ತು ಭಾರತದ ಭವ್ಯ ಸ್ವಾಗತಕ್ಕೆ ಬಂದಿಳಿದ ಕೆಲವು ದಿನಗಳ ಮೊದಲು ಏಳು ಮಂದಿ ಮಹಿಳೆಯರು, ವಾಯುಸೇನೆಯ ವಿಮಾನ ಚಾಲಕರಾಗಿ ಅರ್ಹತೆ ಪಡೆದು ಚರಿತ್ರೆ ನಿರ್ಮಿಸಿದರು. ಇಂಥಾ ಯೋಗ್ಯತೆ ಪಡೆದ ಮೊಟ್ಟ ಮೊದಲ ಮಹಿಳೆಯರು ಇವರು. ಸ್ವಾತಂತ್ರ್ಯ ಬಂದ ನಾಲ್ಕೂವರೆ ದಶಕದ ನಂತರ ಸೇನೆ ತೆರೆದ ಬಾಗಿಲಲ್ಲಿ ನುಗ್ಗಿ ತಮ್ಮ ಸಾಮರ್ಥ್ಯದಿಂದ ಆಕಾಶವನ್ನು ಗೆದ್ದು ಬಂದವರು. ಕಳೆದ ಡಿಸೆಂಬರಿನಲ್ಲಿ ಈ ವಿಮಾನ ಚಾಲಕಿಯರು ಹೈದರಾಬಾದ್ ಬಳಿಯ ದುಂಡಿಗಲ್‌ನಲ್ಲಿ ಯಶಸ್ವಿಯಾಗಿ ತಮ್ಮ ತರಪೇತು ಮುಗಿಸಿ, 'ರೆಕ್ಕೆ' ಗಳನ್ನು ಪಡೆದು ವಾಯುಪಡೆಗೆ ಸೇರಿದರು. ಪ್ರಿಯಾ ನಾಲ್ಗುಂಡ್ವರ್. ಅರ್ಚನಾ ಕಪೂರ್, ಬಿಂದು ಸೆಬಸ್ಟಿಯನ್, ಹರಿಕಾಕಾರ್ ದೇಯೋಲ್, ಅನಿಷಾ ಸಿನ್ಹಾ, ಪಮೆಲಾ ರಾಡ್ರಿಗ್ಸ್, ಪ್ರಿಯಾಪಾಲ್– ಇವರು. ಈ ಏಳು ಮಂದಿ ಮಹಿಳಾ ವಿಮಾನ ಚಾಲಕಿಯರು. 23 ವರ್ಷದ ದಿಲ್ಲಿಯ ಅರ್ಚನಾ ಕಪೂರ್ ಬಾಲ್ಯದಿಂದ ವಿಮಾನ ಹಾರಿಸುವ ಕನಸು ಕಂಡವರು. 26 ವರ್ಷದ ಅನಿಷಾ ಸಿನ್ಹಾ ಎಂಟನೇ ವರ್ಷದಲ್ಲಿ ತಂದೆಯೊಡನೆ ಜಕ್ಕೂರ್ ಫ್ಲೈಟ್ ಕ್ಲಬ್‌ಗೆ ಹೋಗಿದ್ದಾಗ, ಹಾರಾಟದ ಮೊದಲ ರುಚಿ ಕಂಡು, ಹಾರಾಟ ತನ್ನ ಭವಿಷ್ಯ ಎಂದು ನಿರ್ಧರಿಸಿದ್ದರು. ಭಾರತದ ವಾಯುಪಡೆಯನ್ನು ಸೇರುವ ಮೊದಲೇ ಈಕೆ ಹಾರಾಟ ಕಲಿತಿದ್ದು. 25 ಗಂಟೆಗಳ ಹಾರಾಟದ ಅನುಭವ ಪಡೆದಿದ್ದರು. ಪ್ರಿಯಾ ಪಾಲ್ ಅವರಿಗೆ ಹಾರಾಟದ ಯಾವ ಹಿನ್ನೆಲೆಯೂ ಇರಲಿಲ್ಲ. ಪತ್ರಿಕೆಗಳಲ್ಲಿ ಬಂದ ವಾಯುಪಡೆಯ ಜಾಹಿರಾತು ನೋಡಿ ಸಮವಸ್ತ್ರದ ಕೆಲಸದಿಂದ ಆಕರ್ಷಿತರಾಗಿ ಅರ್ಜಿ ಹಾಕಿದ್ದರು. ಬಾಂಬೆಯ ಪಮೆಲಾ ಬಿಸಿನೆಸ್ ಕುಟುಂಬದಿಂದ ಬಂದಾಕೆ. ಎನ್‌ಸಿಸಿ ಕ್ಯಾಡೆಟ್ ಆದ ಈಕೆಗೆ ವಾಯುಪಡೆಯ ಸಾಹಸದ ವೃತ್ತಿ ಆಕರ್ಷಿಸಿತು. ಕೇರಳದ 23 ವರ್ಷದ ಬಿಂದು ಹಾರಾಟದ ಅವಕಾಶಕ್ಕಾಗಿ ತಮ್ಮ ಭೌತಶಾಸ್ತ್ರದ ಎಂ.ಎಸ್ಸಿ.ಯನ್ನೂ ಬಿಟ್ಟು ಬಂದವರು. ಮಹಿಳೆಯರಿಗೆ ಯಾವ ರಿಯಾಯಿತಿಯೂ ಇರಲಿಲ್ಲ, ಈ ಮಹಿಳೆಯರು ತಮ್ಮ ಪುರುಷ ಸಹೋದ್ಯೋಗಿಗಳಿಗೆ ಸಮನಾಗಿ ನಿಂತು ಬಹಳಷ್ಟು ಕಷ್ಟದ ತರಪೇತನ್ನು ಯಶಸ್ವಿಯಾಗಿ ಮುಗಿಸಿ ಬಂದರು. ಮೊದಲ ಹಂತದ ತರಪೇತಿನಲ್ಲಿ 22 ವಾರಗಳು ಎಚ್‌ಪಿಟಿ–32 ವಿಮಾನಗಳನ್ನು 35 ಗಂಟೆಗಳ ಕಾಲ ಹಾರಿಸಬೇಕಿತ್ತು. ಎರಡನೇ ಹಂತದ ಉನ್ನತ ತರಪೇತು ಹೈದರಾಬಾದಿನ 'ವಾಯುಸೇನೆಯ ಅಕಾಡೆಮಿ'ಯಲ್ಲಿ ನಡೆಯಿತು. ಈ ಹಂತದಲ್ಲಿ ಕಿರಣ್ ವಿಮಾನದಲ್ಲಿ ಐದು ತಿಂಗಳ ಅವಧಿಯಲ್ಲಿ 85 ಗಂಟೆಗಳ ಹಾರಾಟ ಮುಗಿಸುವುದಿತ್ತು, ಮೂರನೇ ಹಂತ ಬೆಂಗಳೂರಿನ ಯಲಹಂಕಾದಲ್ಲಿ. 24 ವಾರಗಳ ಕಾಲ ಎಯುಆರ್‌ಒ ಮತ್ತು ಭಾರದ ಎಎನ್–32 ವಿಮಾನಗಳಲ್ಲಿ ತರಪೇತು ಪಡೆದರು.

ಈ ಮಹಿಳೆಯರು ತರಪೇತು ಮುಗಿಸಿ ವಾಯುಸೇನೆಗೆ ಸೇರ್ಪಡೆಯಾಗುವ ಸಂದರ್ಭದಲ್ಲಿ ಆಗಮಿಸಿದ್ದ ಏರ್ ಚೀಫ್ ಮಾರ್ಷಲ್ ಸ್ವರೂಪ್ ಕೃಷ್ಣ ಕೌಲ್ ಅವರು 'ಈ ಏಳು ಮಂದಿ ಯುವತಿಯರು ಅದ್ಭುತ ಕಾರ್ಯ ಸಾಧಿಸುವರೆಂದು' ಆಶಿಸಿದರು. ಆ ಸಮಾರಂಭದಲ್ಲಿ ಅನೇಕ ವಿಭಾಗಗಳಲ್ಲಿ ಮೊದಲಿಗರಾದ ವಿಮಾನ ಚಾಲಕರಿಗೆ ಪ್ರಶಸ್ತಿ. ಪುರಸ್ಕಾರ ನೀಡಲಾಯಿತು, ಇಂಥಾ ಮೊದಲಿಗರಾಗಿ ಪ್ರಶಸ್ತಿ ಪಡೆದವರಲ್ಲಿ ಪ್ರಿಯಾ ನಾಲ್ಗುಂಡ್ವರ್ ಕೂಡಾ ಒಬ್ಬರು ಎಂಬುದು ಮತ್ತೂ ಹೆಮ್ಮೆಯ ವಿಷಯ.

ಮುಚ್ಚಿದ ಬಾಗಿಲುಗಳ ಹಿಂದೆ ಬಂದಿಯಾಗಿದ್ದ ಮಹಿಳೆಗೆ ಅವಕಾಶ ದೊರೆತಂತೆ ದೇಶದ ಸ್ತ್ರೀ–ಶಕ್ತಿಯ ಬಳಕೆಯಾಗುತ್ತಿದೆ. ಒಂದು ಕಾಲಕ್ಕೆ. ಕೇವಲ ಅಡಿಗೆ, ಹೊಲಿಗೆ, ಅಲಂಕಾರ ಇಷ್ಟಕ್ಕೇ ಸೀಮಿತವಾಗಿದ್ದ ಸ್ತ್ರೀ–ಶಕ್ತಿ ಇಂದು ಎಲ್ಲ ರಂಗಗಳಲ್ಲಿ ಮಿಂಚಿ, ದೇಶ ರಕ್ಷಣೆಗೂ ಕೈಗೂಡಿಸಿದೆ. ನಮ್ಮ ಪತ್ರಿಕೆಗಳು, ಸಮೂಹ ಮಾಧ್ಯಮಗಳು ಸ್ತ್ರೀ ಸೌಂದರ್ಯವನ್ನು ಮಾತ್ರ ಗಮನಿಸಿ. ಸ್ತ್ರೀ–ಶಕ್ತಿಯತ್ತ ಕಣ್ಣು ಮುಚ್ಚಿದೆಯೇ ?



# ಭಾರತೀಯ ಸಮಾಜ, ಸಂಸ್ಕೃತಿ, ಮಹಿಳೆ

★ ಸಾರಾ ಅಬೂಬಕ್ಕರ್

ಭಾರತೀಯ ಸಮಾಜ, ಸಂಸ್ಕೃತಿ, ಮತ್ತು ಮಹಿಳೆ ಎನ್ನುವಾಗ ಭಾರತದಲ್ಲಿ ಎಷ್ಟೊಂದು ಸಮಾಜಗಳು, ಭಿನ್ನ ಭಿನ್ನ ಸಂಸ್ಕೃತಿಗಳಿವೆ ಎಂಬುದರ ಕುರಿತು ಮೊದಲು ಯೋಚಿಸಬೇಕಾಗುತ್ತದೆ. ಈ ಎಲ್ಲ ಸಮಾಜಗಳ ಆಳವಾದ ಅಧ್ಯಯನ ನಡೆಸಿ ವಿಭಿನ್ನ ಸಂಸ್ಕೃತಿಗಳು ಹಾಗೂ ಆಯಾ ಸಮಾಜಗಳ ಮಹಿಳೆಯರ ಸ್ಥಿತಿಗತಿಗಳ ಮೇಲೆ ಸಮನಾಗಿ ಬೆಳಕು ಚೆಲ್ಲುವ ಕಾರ್ಯ ನಡೆದಿದೆಯೇ ಎಂದು ಯೋಚಿಸುವಾಗ ತೀರಾ ನಿರಾಶಾದಾಯಕವಾದ ಉತ್ತರವೇ ನಮಗೆ ದೊರೆತೀತು. ನಮ್ಮೂರಿನ ನಗರ ಕೇಂದ್ರ ಗ್ರಂಥಾಲಯದಲ್ಲಿ ಸಮಾಜ, ಸಂಸ್ಕೃತಿ ಮತ್ತು ಮಹಿಳೆಗೆ ಸಂಬಂಧಪಟ್ಟ ಕೃತಿಗಳೇನಾದರೂ ಇವೆಯೇ ಎಂದು ಕೇಳಿದಾಗ ಅಂತಹ ಕೃತಿಗಳಾವುವೂ ತಮ್ಮಲ್ಲಿಲ್ಲವೆಂಬ ಉತ್ತರ ದೊರೆಯಿತು. ಪುರುಷ ಪ್ರಧಾನ ಸಮಾಜಗಳಲ್ಲಿ ಇಂತಹ ವಿಷಯಗಳೆಡೆಗೆ ಪುರುಷರ ಗಮನ ಹರಿಯುವುದು ಅಪರೂಪವೆಂಬುದಕ್ಕೆ ಇದೊಂದು ಉದಾಹರಣೆಯಷ್ಟೆ.

ಭಾರತೀಯ ಸಮಾಜಗಳಲ್ಲಿ ದೇವಾಲಯಗಳಲ್ಲಿ ಹೆಣ್ಣು ಕಲ್ಲಿನ ಮೂರ್ತಿಯಾಗಿ, ದೇವತೆಯಾಗಿ, ಪೂಜಿಸಲ್ಪಡುತ್ತಾಳೆ ದುರ್ಗಾ, ಕಾಳಿ. ಚಂಡಿ ಮುಂತಾದ ದೇವತೆಗಳಿಗೆ ವಿಶಿಷ್ಟ ಸ್ಥಾನವಿದ್ದೇ ಇದೆ. ಗಂಡು ದೇವರ ಬಳಿಯಲ್ಲಿ ಹೆಂಡತಿಯೂ ಪ್ರತಿಷ್ಠಾಪಿಸಲ್ಪಟ್ಟಾಗ ಈ ಗಂಡು ದೇವರುಗಳು ಹೆಚ್ಚು ಜನ ಮನ್ನಣೆ ಪಡೆಯುತ್ತಾರೆ. ಆದರೆ ಹೆಣ್ಣು ದೇವತೆಗಳು ಗಂಡನಿಲ್ಲದೆ ಸ್ವಯಂ ಪ್ರತಿಭೆಯಿಂದಲೇ ಮಿಂಚುತ್ತಾರೆ! ಅಮ್ಮನವರ ಗುಡಿಯಲ್ಲಿ ಅಯ್ಯನವರಿಗೆ ಸ್ಥಾನವಿಲ್ಲದಿದ್ದರೂ ಅಯ್ಯನವರ ಗುಡಿಯಲ್ಲಿ ಅಮ್ಮನವರಿಗೂ ಪೂಜೆ ಸಲ್ಲುವುದು ಸರ್ವೇಸಾಮಾನ್ಯ ಎಂದು ಕೆ. ಆರ್. ಕೃಷ್ಣಮೂರ್ತಿಯವರು ತಮ್ಮದೊಂದು ಕೃತಿಯಲ್ಲಿ ನಿರೂಪಿಸಿದ್ದನ್ನು ನಾವು ನೆನಪಿಸಿಕೊಳ್ಳುತ್ತೇವೆ.

ಅದೇ ಹೆಣ್ಣು ಜೀವಂತವಾಗಿ ಮೈ ತಳೆದು ಬಂದಾಗ ಮಾತ್ರ ಈ ದೇವಿ, ದೇವತೆಗಳೆಂಬ ಕಲ್ಪನೆ ಮಾಯವಾಗುತ್ತವೆ. ಆಗ ಆಕೆ ಎರಡನೇ ದರ್ಜೆಯ ಪ್ರಜೆಯಾಗಿ, ಕಾಮದ ವಸ್ತುವಾಗಿ, ಹೆರುವ ಯಂತ್ರವಾಗಿ, ನಾಲ್ಕು ಗೋಡೆಗಳೊಳಗೆ ಬಂಧಿಯಾಗಿ ಆರ್ಥಿಕ ಪರಾವಲಂಬನೆಯಿಂದಾಗಿ ದಾಸ್ಯ ಮನೋಭಾವವನ್ನು ಮೈಗೂಡಿಸಿಕೊಂಡ ಅಬಲೆ ಎಂದು ವರ್ಣಿಸಲ್ಪಟ್ಟಿದ್ದಾಳೆಯೇ ಹೊರತು ಸ್ವತಂತ್ರ ವ್ಯಕ್ತಿತ್ವ, ಸ್ವತಂತ್ರ ಆಸೆ, ಆಕಾಂಕ್ಷೆಗಳಿರುವ, ತಮಗೆ ಸಮಾನಳಾದ. ಕೌಟುಂಬಿಕ ಬದುಕಿನಲ್ಲಿ ತಮ್ಮಷ್ಟೆ ಪ್ರಾಮುಖ್ಯತೆ ಇರುವ ಮನುಷ್ಯಳೆಂದು ಗೌರವಿಸಲ್ಪಟ್ಟ ಸಂದರ್ಭ ಅಪರೂಪವೆಂದೇ ಹೇಳಬಹುದು.

ವೇದ ಕಾಲದಿಂದಲೂ ಮಹಿಳೆಯರು ಒಂದಲ್ಲ ಒಂದು ವಿಧದ ದೌರ್ಜನ್ಯಕ್ಕೆ ತುತ್ತಾಗಿದ್ದಾರೆಂಬುದಕ್ಕೆ ಸೀತೆ, ದ್ರೌಪದಿಯರ ಕತೆಗಳೇ ಸಾಕ್ಷಿ. ಸೀತೆ, ರಾವಣನ ಬಂಧನದಲ್ಲಿದ್ದು ಬಿಡುಗಡೆಗೊಂಡಾಗ ಆಕೆ ಇನ್ನೂ ಪರಿಶುದ್ಧಳಾಗಿಯೇ ಇದ್ದಾಳೆಯೇ ಎಂದು ತಿಳಿಯಲು ಆಕೆಯನ್ನು ಅಗ್ನಿ ಪರೀಕ್ಷೆಗೆ ಗುರಿಪಡಿಸಲಾಯಿತು. ಅಂದರೆ ಹೆಣ್ಣಿನ ಶೀಲ ಮತ್ತು ಪಾವಿತ್ರ್ಯತೆ ಎಂಬುದು ಪ್ರಾಣಕ್ಕಿಂತಲೂ ಮಿಗಿಲಾದುದು ಎಂಬ ಕಲ್ಪನೆಯನ್ನು ರಾಮಾಯಣ ಕೃತಿ ರಚನೆಯಾದಂದಿನಿಂದಲೂ ಜನಮನದಲ್ಲಿ ಬೇರೂರಿಸಲಾಯಿತು. ಬಲತ್ಕಾರದಿಂದ ಮಹಿಳೆಯೋರ್ವಳ ಮಾನಭಂಗವಾಗಿದ್ದರೂ ಆದು ಬಹಿರಂಗಗೊಂಡರೆ ಆಕೆ ಜಾತಿಭ್ರಷ್ಟಳಾಗಬೇಕಾಗುತ್ತದೆ! ಆಕೆ ಅವಿವಾಹಿತ ಹೆಣ್ಣಾಗಿದ್ದರೆ ಮುಂದೆ ಆಕೆಯ ಮದುವೆ ಕನಸಿನ ಮಾತೇ ಸರಿ. ವಿವಾಹಿತೆಯೋರ್ವಳು ಅತ್ಯಾಚಾರಕ್ಕೆ ಗುರಿಯಾದರೆ ಆಕೆ ಪತಿಯ ಮನೆಯಿಂದ ಹೊರ ದೂಡಲ್ಪಡುತ್ತಾಳೆ. ಇಂತಹ ಪ್ರಸಂಗಗಳಲ್ಲಿ ದೊಡ್ಡ ಮನಸ್ಸಿನಿಂದ ಆಕೆಯನ್ನು 'ಕ್ಷಮಿಸಬಲ್ಲ' ಗಂಡಂದಿರು ಭಾರತೀಯ ಸಮಾಜಗಳಲ್ಲಿ ದೊರೆಯುವುದು ದುರ್ಲಭವೆಂದೇ ಹೇಳಬಹುದು. ಆ ಮಹಿಳೆ ಮಾತ್ರ ನಾಯಿ ಮುಟ್ಟಿದ ಮಡಕೆಯಾಗುತ್ತಾಳೆಯೇ ಹೊರತು ಅತ್ಯಾಚಾರವೆಸಗಿದ ಪುರುಷನಿಗೆ ಯಾವ ಕಳಂಕವೂ ತಟ್ಟುವುದಿಲ್ಲ. ಹೀಗಾಗಿ ಮಾನಭಂಗಕ್ಕೊಳಗಾದ ಹೆಣ್ಣು ತನ್ನ ಮೇಲಾದ ಈ ದೌರ್ಜನ್ಯವನ್ನು ಬಹಿರಂಗಗೊಳಿಸದೇ ಮುಚ್ಚಿಡುತ್ತಾಳೆ. ಇಂತಹ ಸಂದರ್ಭಗಳಲ್ಲಿ ಅಪರೂಪಕ್ಕೆ ಮಹಿಳೆಯರು ನ್ಯಾಯಾಲಯಕ್ಕೆ ಹೋದರೂ ಅಲ್ಲಿ ಅಪರಾಧೀ ಪರ ವಕೀಲರು ಕೇಳುವ ಅಸಹ್ಯವಾದ, ಅಶ್ಲೀಲವಾದ ಪ್ರಶ್ನೆಗಳಿಗೆ ಉತ್ತರ ಕೊಡಲಾಗದೆ ತಲೆ

ತಗ್ಗಿಸಿ ನಿಂತಾಗ ಅತ್ಯಾಚಾರವಾಗಿಯೇ ಇಲ್ಲವೆಂಬುದನ್ನು ಅಪರಾಧೀ ಪರ ವಕೀಲರು ಸಾಬೀತು ಪಡಿಸುತ್ತಾರೆ. ಕೊನೆಗೂ ಮಹಿಳೆಯರು ನ್ಯಾಯದಿಂದ ವಂಚಿಸಲ್ಪಡುತ್ತಾರೆ. ಹೀಗಾಗಿಯೇ ಇಂದು ದೇಶದಲ್ಲಿ ಪ್ರತಿ 47 ನಿಮಿಷಕ್ಕೆ ಓರ್ವ ಮಹಿಳೆಯ ಮಾನಭಂಗದ ಘಟನೆ ನಡೆಯುತ್ತಿದ್ದರೂ ಅವುಗಳಲ್ಲಿ ಶೇಕಡಾ ಹತ್ತರಷ್ಟು ಪ್ರಕರಣಗಳಾದರೂ ಪೋಲೀಸ್ ಠಾಣೆಗಳಲ್ಲಿ ದಾಖಲಾಗುತ್ತವೆಯೇ ಎಂಬುದು ಸಂದೇಹಾಸ್ಪದವಾಗಿದೆ. ಹೀಗಾಗಿಯೇ ಅಪರಾಧವೆಸಗಿದ ಪುರುಷರು ಶಿಕ್ಷೆಗೊಳಪಡದೆ ಹಾಯಾಗಿ ತಿರುಗುತ್ತಿದ್ದು ಮತ್ತಷ್ಟು ದೌರ್ಜನ್ಯಗಳಿಗೆ ಆಸ್ಪದವುಂಟಾಗುತ್ತದೆ.

ಅತ್ಯಾಚಾರದಿಂದ ಮಹಿಳೆಯರು ಅಪವಿತ್ರರಾಗುವುದಿಲ್ಲ; ಅದು ಕೇವಲ ಒಂದು ಅಪಘಾತ; ಅದರಿಂದ ಆಕೆಯ ಶೀಲಕ್ಕೆ ಯಾವ ಕಳಂಕವೂ ತಟ್ಟುವುದಿಲ್ಲ ಎಂದು ಈ ಮಹಿಳೆಯರನ್ನು ಸಂತೈಸುವ ಸಮಾಜ ಇನ್ನೂ ಮೂಡಿ ಬಂದಿಲ್ಲ. ಇಂತಹ ಸಂದರ್ಭಗಳಲ್ಲಿ ಸಮಾಜದ ದೃಷ್ಟಿಕೋನ ಬದಲಾಗಬೇಕು. ಮಾನಭಂಗಕ್ಕೀಡಾದ ಮಹಿಳೆಯನ್ನು ಸಮಾಜ ಸಹಾನುಭೂತಿಯಿಂದ ನಡೆಸಿಕೊಳ್ಳಬೇಕು. ಯಾವ ರೀತಿಯ ಅಪರಾಧೀ ಮನೋಭಾವವೂ, ಕೀಳರಿಮೆಯೂ ಆಕೆಯನ್ನು ಬಾಧಿಸಬೇಕಾಗಿಲ್ಲ ಎಂಬುದನ್ನು ಆಕೆಗೆ ಮನವರಿಕೆ ಮಾಡಿಕೊಡಬೇಕು. ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳ ವಿಚಾರಣೆಗಾಗಿ ಅಧಿಕ ಸಂಖ್ಯೆಯಲ್ಲಿ ಮಹಿಳಾ ನ್ಯಾಯಾಲಯಗಳ ಸ್ಥಾಪನೆಯಾಗಬೇಕು, ಎಂದು ಈ ಸಂದರ್ಭದಲ್ಲಿ ನಾನು ಹೇಳಲಿಚ್ಛಿಸುತ್ತೇನೆ.

ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆ ಎಂದಿಗೂ ಸ್ವತಂತ್ರಳಲ್ಲ. 'ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ; ಹೆಣ್ಣು ವಿದ್ಯಾಭ್ಯಾಸ ಪಡೆಯಬಾರದು.' ಎಂಬ ವಾಕ್ಯಗಳನ್ನು ಧರ್ಮಗ್ರಂಥಗಳಲ್ಲಿಯೇ ಉಲ್ಲೇಖಿಸಲಾಗಿದೆ. ಹುಟ್ಟಿದ ಮನೆ ಎಂದಿಗೂ ಆಕೆಗೆ ತನ್ನ ಮನೆ ಎನ್ನಿಸದಂತೆ ಮನೆಯಲ್ಲಿ ಮಾತುಕತೆಗಳಿರುತ್ತವೆ. 'ಹೆಣ್ಣು ಮಗಳು ಎಂದಿದ್ದರೂ ಪರರ ಮನೆಗೆ ಹೋಗುವವಳು; ಪರರ ಸೊತ್ತು' ಎನ್ನುತ್ತಾ ಹುಟ್ಟಿದಂದಿನಿಂದಲೂ ಗಂಡನ ಮನೆಯಲ್ಲಿ ಹೇಗೆ ಬದುಕಿ ಬಾಳಬೇಕೆಂಬ ಕುರಿತ ಬುದ್ಧಿವಾದವನ್ನೇ ಆಕೆಗೆ ಅರೆದು ಕುಡಿಸಲಾಗುತ್ತದೆ.' 'ನಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು ನಿಮ್ಮ ಮುಡಿಲೊಳಗಿಡಲು ತಂದಿರುವೆವು,' ಎಂಬ ಹಾಡಿನ ಈ ಸಾಲುಗಳು ನೆನಪಾದೊಡನೆ, ನಮ್ಮ ಮನೆಯಂಗಳದ ಈ ಮೊಗ್ಗು ಪೂರ್ಣ ಬಿರಿಯುವ ಮೊದಲೇ ಇನ್ನೊಬ್ಬರ ಮಡಿಲಿಗೆ ಎಸೆಯುವಂತಹ ಈ ಸಮಾಜ ವ್ಯವಸ್ಥೆ ಹೇಗೆ ಪ್ರಾರಂಭವಾಯಿತು ಎಂಬ ಪ್ರಶ್ನೆಯೂ ನಮಗೆದುರಾಗುತ್ತದೆ. "ಕೊಟ್ಟ ಮನೆಯಲ್ಲಿ ಹುಟ್ಟಿದ ಮನೆಯ ಕೀರ್ತಿ ಪತಾಕೆ ಹಾರಿಸು. ತವರು ಮನೆಗೆ ಕೆಟ್ಟ ಹೆಸರು ತರಬೇಡ" ಎಂಬ ಮಾತುಗಳನ್ನು ತಲೆಯೊಳಗೆ ತುಂಬಿಸಿಯೇ ಆಕೆಯನ್ನು ಗಂಡನಮನೆಗೆ ಕಳುಹಿಸಿಕೊಡಲಾಗುತ್ತದೆ. ಅಲ್ಲಾದರೂ ಆಕೆಗೆ ನೆಮ್ಮದಿಯ ಬದುಕೆಂಬುದಿದೆಯೇ? ಮನೆಗೆ ಸೊಸೆ ಬಂದೊಡನೆ ಅತ್ತೆ ಅಡಿಗೆ ಮನೆಯಿಂದ ನಿವೃತ್ತಳಾಗುತ್ತಾಳೆ. ಅತ್ತೆ ಮಾವಂದಿರ ಚಾಕರಿ, ಅಡಿಗೆ, ಗಂಡನ ಸೇವೆ ಎನ್ನುತ್ತಾ ಬಗ್ಗಿಸಿದ ನಡು ಮೇಲೆತ್ತದೆಯೇ ಆಕೆಯ ದಿನಗಳು ಉರುಳಿ ಹೋಗುತ್ತವೆ. ಈ ಕತ್ತೆ ಚಾಕರಿಯನ್ನು ಪ್ರತಿಭಟಿಸಿದ ಹೆಣ್ಣು 'ಗಯ್ಯಾಳಿ, ಜೋರಿನವಳು' ಎಂಬ ಬಿರುದನ್ನು ಹೊತ್ತುಕೊಂಡು ತವರಿಗೆ ಅಪಕೀರ್ತಿ ತಂದವಳೆನ್ನಿಸಿಕೊಳ್ಳುತ್ತಾಳೆ.

ಹಿಂದಿನ ಕಾಲದಲ್ಲಿ ಸೊಸೆಯಿಂದ ಇಂತಹ ಸೇವೆಯನ್ನು ನಿರೀಕ್ಷಿಸುತ್ತಿದ್ದ ಗಂಡನ ಮನೆಯವರು ಇಂದು ಆಕೆಯಿಂದ ಆರ್ಥಿಕ ಲಾಭವನ್ನೂ ನಿರೀಕ್ಷಿಸುತ್ತಾರೆ. ಎರಡು ಹೃದಯಗಳನ್ನು ಬೆಸೆಯಬಹುದಾಗಿದ್ದ, ಕುಟುಂಬಗಳನ್ನು ಒಂದುಗೂಡಿಸಬಹುದಾಗಿದ್ದ ಮದುವೆ ಎಂಬ ಮಧುರ ಬಾಂಧವ್ಯಕ್ಕೆ ನಾಂದಿ ಹಾಡಬಹುದಾದ ಘಟನೆ ಇಂದು ವ್ಯಾಪಾರವಾಗಿದೆ. ಮಾತೆ, ದೇವಿ ಎಂದು ಪೂಜಿಸಲ್ಪಟ್ಟ ಹೆಣ್ಣು ಇಂದು ಲಕ್ಷ್ಮಿಯಾಗಿಯೇ ಮನೆ ತುಂಬಬೇಕಾಗುತ್ತದೆ. ಹೆಣ್ಣಿನ ಗುಣ, ವಿದ್ಯಾಭ್ಯಾಸ ಸೌಂದರ್ಯ ಇವೆಲ್ಲವೂ ಗೌಣವಾಗಿ ಆಕೆ ತರಬಹುದಾದ ಆರ್ಥಿಕ ಮೊತ್ತವಷ್ಟೆ ಮದುವೆಯ ಮಾರುಕಟ್ಟೆಯಲ್ಲಿ ಚಲಿಸುವ ನಾಣ್ಯವಾಗಿದೆ. ವರದಕ್ಷಿಣೆಯ ಮೊತ್ತ ಕಮ್ಮಿಯಾದಾಗ ಆಕೆಯ ಮೇಲೆ ಹಲವು ವಿಧದ ದೌರ್ಜನ್ಯಗಳೆಸಲ್ಪಡುತ್ತವೆ. ನಮ್ಮ ದೇಶದಲ್ಲಿ ಪ್ರತಿದಿನ ಸುಮಾರು ಹದಿನೇಳು ವರದಕ್ಷಿಣೆ ಸಾವುಗಳು ಸಂಭವಿಸುತ್ತಿವೆ. ದಾಖಲಾಗದ ವರದಕ್ಷಿಣೆ ಸಾವುಗಳೂ ಸಾಕಷ್ಟಿರಬಹುದು, 'ಮಗಳಂತೂ ಹೋದಳು. ಇನ್ನು ಕೋರ್ಟು ಕಚೇರಿ ತಿರುಗಿ ಏನು ಪ್ರಯೋಜನ?' ಎಂದು ಉದಾಸೀನ ತಾಳುವ ತಂದೆ ತಾಯಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ, ಇಲ್ಲಿ ಮತ್ತೂ ಒಂದು ಮುಖ್ಯವಾದ ಅಂಶವಿದೆ, ಭಾರತೀಯ ಸಂಸ್ಕೃತಿ ಎಂದರೆ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬುದು ತಾನೇ? ಪತಿಯೇ ಪರದೈವವೆಂದು ಬಗೆದು ಏನೇ ಕಷ್ಟ ಬಂದರೂ ಗಂಡನ ಮನೆ

ತೊರೆದು ಬರಬಾರದೆಂಬ ಹಿತವಚನವನ್ನು ಮನದಾಳದಲ್ಲಿ ಬೇರೂರಿಸಿಕೊಂಡು ಬಂದ ಹೆಣ್ಣು ಗಂಡನ ಮನೆಯ ಎಲ್ಲ ಕಿರುಕುಳವನ್ನೂ ತುಟಿ ಕಚ್ಚಿ ನುಂಗಿಕೊಳ್ಳುತ್ತಾಳೆ. ಏನೇ ಆದರೂ ತವರಿಗೆ ಹಿಂತಿರುಗಲು, ತವರಿನಲ್ಲಿ ದೂರಿಕೊಳ್ಳಲು ಆಕೆಯ ಸ್ವಾಭಿಮಾನ ಅಡ್ಡಿಯಾಗುತ್ತದೆ, ಈ ಅಗಾಧ ಪ್ರಮಾಣದ ವರದಕ್ಷಿಣೆ 'ಗಂಡನನ್ನು ವೇಶ್ಯೆಯ ಮನೆಗೆ ಹೊತ್ತು ಕೊಂಡೊಯ್ದ ಕತೆಯನ್ನು ಇಂದಿಗೂ ವೈಭವೀಕರಿಸಿ ಹೇಳಲಾಗುತ್ತಿದೆ. ಸಾವುಗಳಿಗೆ ಭಾರತೀಯ ಸಂಸ್ಕೃತಿಯಂತೆ ಹೆಣ್ಣು ಮಕ್ಕಳಿಗೆ ತವರಿನ ಸಂಬಂಧ ಕಡಿದು ಹೋಗುವುದೇ ಮುಖ್ಯ ಕಾರಣವೆನಿಸುತ್ತದೆ. 'ಗಂಡನ ಮನೆಯಲ್ಲಿ ನೆಮ್ಮದಿ ಇಲ್ಲವಾದರೆ ತವರಿಗೆ ಬಾ' ಎಂದು ಯಾವ ತಾಯಿಯೂ ಮಗಳನ್ನು ಗಂಡನ ಮನೆಗೆ ಕಳುಹಿಸುವ ಸಂದರ್ಭದಲ್ಲಿ ಕಿವಿಮಾತು ಹೇಳುವುದಿಲ್ಲ, ಗಂಡನ ಪಾದಗಳಡಿಯಲ್ಲಿ ಹೆಂಡತಿ ಸ್ವರ್ಗ ಕಾಣಬೇಕಾಗಿರುವುದರಿಂದ ಆ ಸ್ವರ್ಗ, ಆಕೆಯ ಪಾಲಿಗೆ ನರಕವಾಗಿದ್ದರೂ ಅಲ್ಲೇ ಆಕೆ ಸಾವನ್ನು ಬರಮಾಡಿಕೊಳ್ಳುತ್ತಾಳೆಯೇ ಹೊರತು ಅಲ್ಲಿಂದ ತವರಿನಾಸರೆಗೆ ಬರುವ ಹೆಣ್ಣು ಮಕ್ಕಳು ತೀರಾ ಕಮ್ಮಿಯಷ್ಟೆ.

ಭಾರತೀಯ ಸಂಸ್ಕೃತಿ ಎಂದರೇನೇ ಮಹಿಳೆಯರ ಮೇರೆ ಹಲವು ವಿಧದ ನಿಯಂತ್ರಣ ಹೇರುವುದೇ ಆಗಿದೆ. ಮೈ ನೆರೆಯುವ ಮೊದಲೇ ಹೆಣ್ಣು ಮಕ್ಕಳಿಗೆ ಮದುವೆ ಮಾಡಬೇಕೆಂಬ ನಿಯಮದಂತೆ ಇಂದಿಗೂ ಬಾಲ್ಯ ವಿವಾಹ ಪದ್ಧತಿ ದೇಶದ ಹಲವೆಡೆಗಳಲ್ಲಿ ಜಾರಿಯಲ್ಲಿದೆ. ಸತೀ ಸಹಗಮನದ ಹೆಸರಿನಲ್ಲಿ ಗಂಡ ಸತ್ತರೆ ಹೆಂಡತಿಯನ್ನೂ ಆ ಚಿತೆಗೆ ತಳ್ಳಿ ಆಕೆಯ ಕೊಲೆ ಮಾಡುವಂತಹ ಕ್ರೂರ ಪದ್ಧತಿಯೂ ಈ ಸಮಾಜದಲ್ಲಿ ಜಾರಿಯಲ್ಲಿದೆ. ಹಲವು ಮಹಾನ್ ವ್ಯಕ್ತಿಗಳ ಹೋರಾಟದಿಂದ ಅದು ನಿಂತು ಹೋಗಿದ್ದರೂ ಈಗ ನಾವು 21ನೇ ಶತಮಾನದ ಹೊಸ್ತಿಲಲ್ಲಿ ನಿಂತಿರುವ ಈ ಸಂದರ್ಭದಲ್ಲಿ ಕೂಡಾ ಈ ಪದ್ಧತಿಗೆ ಪುನಃ ಜೀವದಾನ ಮಾಡುವ ಪ್ರಯತ್ನವೊಂದು ನಡೆದದ್ದನ್ನು ಯಾರೂ ಮರೆತಿರಲಾರರು. ಗೋವಧೆಯನ್ನು ನಿಷೇಧಿಸಬೇಕೆಂದು ಕೂಗೆಬ್ಬಿಸುವ ಈ ಸಮಾಜ ಹೆಣ್ಣೊಬ್ಬಳ ಜೀವಂತ ದಹನವನ್ನು ಸಮರ್ಥಿಸುವ ಪ್ರಯತ್ನವೂ ಮುಂದಾಯಿತು ! ದೇಶದ ಪ್ರಧಾನಿಯೇ ಖಂಡಿಸಿ ಹೇಳಿಕೆ ನೀಡಲು 23 ದಿನಗಳಷ್ಟು ದೀರ್ಘ ಅವಧಿ ತೆಗೆದುಕೊಂಡರು.

ಹೆಣ್ಣಿಗೆ ಸತಿ ಸಹಗಮನದಿಂದ ಮುಕ್ತಿ ದೊರೆತರೂ ವಿಧವಾ ಪಟ್ಟದಿಂದ ಇಂದಿಗೂ ಮುಕ್ತಿ ದೊರೆತಿಲ್ಲ. ಗಂಡ ಸತ್ತೊಡನೆ ಆಕೆ ಎಲ್ಲ ಸುಖ ಸಂತೋಷಗಳನ್ನೂ ಕೈಬಿಡಬೇಕಾಗುತ್ತದೆ. ವಿಧವೆಯರು ಇಂದಿಗೂ ಅಪಶಕುನದ ಆಗರವೆಂಬ ಕಲ್ಪನೆ ಭಾರತೀಯ ಸಮಾಜದಲ್ಲಿ ಬೇರೂರಿ ನಿಂತಿದೆ. ಸ್ವಂತ ಮಕ್ಕಳ ಮದುವೆ ಸಮಾರಂಭದಲ್ಲಿ ಭಾಗವಹಿಸಲಾಗದ ತಾಯಿ ಪರಕೀಯಳಂತೆ ಕೋಣೆಯೊಳಗೆ ಅಡಗಿ ಕುಳಿತುಕೊಳ್ಳುವಂತೆ ಮಾಡುವ ವ್ಯವಸ್ಥೆ ಇದಾಗಿದೆ. ಹಾಗೆಯೇ ಬಂಜೆಯರ ಮುಖ ದರ್ಶನ ಕೂಡಾ ಅಮಂಗಳದ, ಅಪಶಕುನದ ಧ್ಯೋತಕವೆಂದೇ ಪರಿಗಣಿಸಲಾಗುತ್ತದೆ. ಗರ್ಭಿಣಿಯರ ಬಯಕೆಶಾಸ್ತ್ರ, ಮಗುವಿನ ತೊಟ್ಟಿಲು ಶಾಸ್ತ್ರ ಮುಂತಾದೆಡೆಗಳಲ್ಲಿ ಬಂಜೆಯರಿಗೆ ಆಹ್ವಾನವಿಲ್ಲ. ಗಂಡಿಗೂ ಬಂಜೆತನವಿದೆ ಎಂಬುದು ಇನ್ನೂ ಕೂಡಾ ಸಮಾಜದ ಅರಿವಿಗೆ ಬಂದಂತಿಲ್ಲ. ಬಂಜೆತನಕ್ಕೆ ಹೆಣ್ಣೇ ಕಾರಣವೆಂಬ ಬಲವಾದ ನಂಬಿಕೆ ಇಂದಿಗೂ ಈ ಸಮಾಜದಲ್ಲಿ ಬೇರೂರಿ ನಿಂತಿದೆ.

ಪ್ರಕೃತಿ ನಿಯಮವನ್ನು ಹೆಣ್ಣಿನ ಶೋಷಣೆಗೆ ಬಳಸಿಕೊಂಡ ಸಂಸ್ಕೃತಿ ನಮ್ಮದು. ಮುಟ್ಟಿನ ಮೂರು ದಿನಗಳಲ್ಲಿ ಆಕೆ ಅಸ್ಪೃಶ್ಯಳು. ವಿವಾಹಕ್ಕೆ ಮೊದಲೇ ಮೈನೆರೆದರೆ ಕಣ್ಣು ಕಟ್ಟಿ ಕಾಡಿನಲ್ಲಿ ಬಿಡುವ ಸಂಪ್ರದಾಯವೂ ನಮ್ಮಲ್ಲಿತ್ತು. ಯಾರು ಆ ಕಟ್ಟನ್ನು ಕಟ್ಟುತ್ತಾರೋ ಅವರೇ ಆಕೆಯ 'ಯಜಮಾನ'ರಾಗುತ್ತಾರೆ. ಗಂಡ ಹೆಂಡತಿಯ ಸಂಬಂಧವೆಂದರೆ ಯಜಮಾನ ಮತ್ತು ಸೇವಕಿಯ ಸಂಬಂಧ ತಾನೇ? ಯಾಕೆಂದರೆ ಹೆಂಗಸರು ಗಂಡನನ್ನು 'ನಮ್ಮೆಜಮಾನರು' ಎನ್ನುವುದು ಇಂದಿಗೂ ರೂಢಿಯಲ್ಲಿದೆ.

ಹೆಣ್ಣಿನ ಶಿಶು ಹತ್ಯೆ ಕೂಡಾ ಇಂದು ನಿನ್ನಿನ ವಿಷಯವಲ್ಲ. ಹೆಣ್ಣು ಮಕ್ಕಳಿಗೆ ಮದುವೆಯೆಂಬುದು ಕಡ್ಡಾಯವಾಗಿ ಆಗಲೇಬೇಕೆಂಬ ಸಂಪ್ರದಾಯ ಮತ್ತು ಕೆಲವೆಡೆ ಪುರೋಹಿತರ ದಕ್ಷಿಣೆ ಮತ್ತಿತರ ಖರ್ಚುಗಳೇ ಹೊರಲಾರದ ಹೊರೆಯಾದಾಗ ಹೆಣ್ಣು ಶಿಶು ಹತ್ಯೆಗೂ ಜನ ಮುಂದಾಗಿ ಇಂದಿಗೂ ಮುಂದುವರೆಯುತ್ತಿದೆ! ನವಜಾತ ಹೆಣ್ಣು ಶಿಶುಗಳನ್ನು ಕೊಲೆ ಮಾಡುವ ಕ್ರೂರ ಸಂಪ್ರದಾಯ ನಮ್ಮ ನೆರೆಯ ತಮಿಳುನಾಡು ಮತ್ತು ರಾಜಸ್ಥಾನದ ಕೆಲವು ಹಳ್ಳಿಗಳಲ್ಲಿ ಇಂದಿಗೂ ಜೀವಂತವಾಗಿದೆ.

ಉತ್ತರ ಭಾರತದ ಕೆಲವೆಡೆಗಳಲ್ಲಿ ಹೆಂಡತಿ ತೊಡುವ ಆಭರಣ ಗಂಡನ ಸಂಪತ್ತಿನ ಕುರುಹೆಂದು ಪರಿಗಣಿಸಲ್ಪಡುತ್ತದೆ. ಆಕೆಯ ಮೂಗಿಗೆ ರಿಂಗ್

(ಉಂಗುರದಂತಹ ಆಭರಣ) ತೊಡಿಸಲಾಗುತ್ತದೆ. ಗಂಡನ ಸಂಪತ್ತು ವೃದ್ಧಿಸುತ್ತಾ ಹೋದಂತೆ ಆಕೆ ಮೂಗಿನ ಈ ರಿಂಗನ್ನೂ ಇನ್ನಷ್ಟು, ಮತ್ತಷ್ಟು ಹಿಗ್ಗಿಸಿ ಕೊಳ್ಳಬೇಕಾಗುತ್ತದೆ! ಇದರ ಭಾರದಿಂದ ಆಕೆಯ ಮೂಗು ಹರಿದು ಹೋದರೂ ಪರವಾಗಿಲ್ಲ; ಆದರೆ ಗಂಡನ ಪ್ರತಿಷ್ಠೆಯ ಕುರುಹಾಗಿ ದೊಡ್ಡ ರಿಂಗ್ ಒಂದು ಆಕೆಯ ಮೂಗಿನಲ್ಲಿ ನೇತಾಡಲೇ ಬೇಕು.

ಹಿಂದೂ ಸಂಸ್ಕೃತಿಯಲ್ಲಿ ಜಾತಕವೂ ಹೆಣ್ಣುಮಕ್ಕಳ ಮದುವೆಗೆ ತಡೆಯಾಗಿ ಪರಿಣಮಿಸಿದೆ. ಮೂಲಾ ನಕ್ಷತ್ರ ದಲ್ಲಿ ಹುಟ್ಟಿದಾಕೆಗೆ ಮಾವನಿಲ್ಲದ ಮನೆಯೇ ಆಗಬೇಕಾ ಗುತ್ತವೆ. ಜಾತಕದ ತೊಂದರೆಯಿಂದಾಗಿ ಎಷ್ಟೋ ಮದುವೆಗಳು ಎಲ್ಲರ ಒಪ್ಪಿಗೆಯಿದ್ದೂ ನಡೆಯದಂತಾ ಗುತ್ತದೆ. ಕೆಟ್ಟ ನಕ್ಷತ್ರದಲ್ಲಿ ಹುಟ್ಟಿದಾಕೆ ಬಹಳ ವರ್ಷ ಮದುವೆ ಇಲ್ಲದೆ, ಕೊನೆಗೆ ಮದುವೆಯಾದರೂ ಮಾನಸಿಕ ಸ್ಥಿಮಿತ ಕಳೆದುಕೊಂಡು ಕೊನೆಗೂ ಆತ್ಮಹತ್ಯೆ ಮಾಡಿ ಕೊಂಡದ್ದನ್ನು ನಾನು ಕಂಡಿದ್ದೇನೆ.

ಹೈದರಾಬಾದಿನ ನಿಜಾಮರು ಮುಸ್ಲಿಂ ಪುರುಷರ ಬಹುಪತ್ನಿತ್ವವನ್ನು ಪ್ರೋತ್ಸಾಹಿಸುತ್ತಿದ್ದರು. ಓರ್ವನಿಗೆ ಹೆಚ್ಚು ಜನ ಹೆಂಡತಿಯರಿದ್ದರೆ ಆತನಿಗೆ ಪತ್ನಿಯರ ಸಂಖ್ಯೆಯನ್ನನುಸರಿಸಿ ಭತ್ಯೆ ನೀಡುತ್ತಿದ್ದರೆಂದೂ ಕೇಳಿ ದ್ದೇನೆ. ಮುಸ್ಲಿಮರ ಬಹುಪತ್ನಿತ್ವವನ್ನು 'ದಲಿತ್ ವಾಯ್ಸ್' ಎಂಬ ಪತ್ರಿಕೆ ಈ ರೀತಿ ವರ್ಣಿಸಿದೆ. 'ಮುಸ್ಲಿ ಮರಿಗೆ ತಮ್ಮ ಹೊಲದಲ್ಲಿ ಕೆಲಸ ಮಾಡಲು ಕೂಲಿ ಯಾಳುಗಳ ಆವಶ್ಯಕತೆಯಿದೆ. ಕೆಲಸಕ್ಕೆ ಆಳುಗಳನ್ನಿಟ್ಟು ಕೊಂಡರೆ ಅವರಿಗೆ ಸಂಬಳ ಕೊಡಬೇಕಾಗುತ್ತದೆ. ಹೆಂಡತಿಯರೇ ಆದರೆ ಬಿಟ್ಟಿಯಾಗಿ ದುಡಿಯುತ್ತಾರೆ. ಹೀಗಾಗಿ ಅವರು ನಾಲ್ಕು ಜನ ಪತ್ನಿಯರನ್ನಿಟ್ಟು ಕೊಂಡರೆ ತಪ್ಪೇನು?' ಎಂಬ ವಾದ ಈ ಪತ್ರಿಕೆಯದು! ಹೆಂಡತಿಯೆಂದರೆ ಕೂಲಿಯಾಳಿಗಿಂತಲೂ ಕಡೆ ಎಂಬುದು ಈ ಪತ್ರಿಕಾ ಸಂಪಾದಕರ ಅಭಿಪ್ರಾಯವಿರಬಹುದು. ಇಸ್ಲಾಂ ಧರ್ಮದಲ್ಲಿ ಬಹುಪತ್ನಿತ್ವಕ್ಕೆ ಬೇರೆಯೇ ವ್ಯಾಖ್ಯಾನವಿದೆ. ಆಗಾಗ ಯುದ್ಧಗಳಾಗಿ ಬಹಳ ಪುರು ಷರು ಮರಣ ಹೊಂದಿ ವಿಧವೆಯರೂ, ಅವರ ಅನಾಥ ಮಕ್ಕಳೂ ನಿರ್ಗತಿಕರಾದಾಗ ಈ ಮಕ್ಕಳ ಪೋಷಣೆಗಾಗಿ ಆ ವಿಧವೆಯರನ್ನು ವಿವಾಹವಾಗಲು ಪೈಗಂಬರರು ತಮ್ಮ ಅನುಯಾಯಿಗಳಿಗೆ ಬೋಧಿಸಿದರು. ಅದಕ್ಕೆ ಸಾಕಷ್ಟು ಶರ್ತಗಳನ್ನೂ ಒಡ್ಡಿದರು. ಆದರೆ ಇಂತಹ ನಿಯಮಗಳೆಲ್ಲವೂ ಈ ಪತ್ರಿಕಾಸಂಪಾದಕರಂತಹ ಸಮಯ ಸಾಧಕರ ಕೈಯಲ್ಲಿ ದೊರೆತಾಗ ಅದು ಯಾವ ರೀತಿ ತಿರುಚಲ್ಪಟ್ಟು ಮಹಿಳೆಯರ ಶೋಷಣೆಗೆ ಹಾದಿ ಮಾಡಿ ಕೊಡುತ್ತದೆ ಎಂಬುದಕ್ಕೆ ಇದೊಂದು ಉದಾಹರಣೆಯಷ್ಟೆ.

ಭಾರತದ ಸಮಾಜ ವ್ಯವಸ್ಥೆಯಲ್ಲಿ ಎಲ್ಲ ಧರ್ಮ ಗಳಲ್ಲಿಯೂ ಕೌಟುಂಬಿಕ ನಿರ್ಧಾರಗಳೆಲ್ಲವೂ ಪುರುಷದೇ ಆಗಿರುತ್ತವೆ. ಆಸ್ತಿ ಮಾರಾಟದ ವಿಷಯದಲ್ಲಾಗಲಿ, ಮಕ್ಕಳ ಮದುವೆಯ ವಿಷಯದಲ್ಲಾಗಲಿ ಹೆಂಡತಿಯೊಡನೆ ಸಮಾಲೋಚಿಸುವ ಪುರುಷರು ಅಪರೂಪವೆಂದೇ ಹೇಳ ಬಹುದು. ಹೆಚ್ಚೇಕೆ? ಕುಟುಂಬ ಯೋಜನೆಯ ಶಸ್ತ್ರ ಚಿಕಿತ್ಸೆಯನ್ನಾದರೂ ಗಂಡನ ಅನುಮತಿ ಇಲ್ಲದೆ ಮಾಡಲು ಮಹಿಳೆಯರು ಮುಂದಾಗುವುದಿಲ್ಲ. ಮುಸ್ಲಿಂ ಮಹಿಳೆಯೋರ್ವಳು ಎಂಟನೇ ಹೆರಿಗೆಯಲ್ಲಿ ಬಹಳಷ್ಟು ರಕ್ತಸ್ರಾವವಾಗಿ ಡಾಕ್ಟರ ಸಲಹೆಯಂತೆ ಗಂಡನ ಅನುಪ ಸ್ಥಿತಿಯಲ್ಲಿ ಗರ್ಭನಿರೋಧಕ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ದ್ದಕ್ಕಾಗಿ ಆಕೆಯ ಗಂಡ ಮತ್ತು ಅತ್ತೆ ಆಕೆಗೆ ಛೀಮಾರಿ ಹಾಕಿ ಕೊನೆಗೂ ಆಕೆಗೆ ತಲಾಖ್ ನೀಡಿದ ಘಟನೆ ಕೆಲವು ವರ್ಷಗಳ ಹಿಂದೆ ರಾಯಚೂರಿನಲ್ಲಿ ನಡೆದಿದೆ.

ಈಗಂತೂ ಮಹಿಳೆಯರಿಗೆ ಶಿಕ್ಷಣದ ಅವಕಾಶ ಸಾಕಷ್ಟಿದೆ. ನಗರ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳು ಗಂಡು ಮಕ್ಕಳಿಗೆ ಸರಿಸಮನಾಗಿ ವಿದ್ಯಾಭ್ಯಾಸ ಪಡೆಯು ತ್ತಲೂ ಇದ್ದಾರೆ. ಆದರೆ ಹಳ್ಳಿಗಳಲ್ಲಿ ಇಂದಿಗೂ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರಾಮುಖ್ಯತೆ ದೊರೆತಿಲ್ಲ. 'ಅಡಿಗೆ ಮಾಡಲು, ಮಕ್ಕಳನ್ನು ಸಾಕಲು ಎಷ್ಟು ವಿದ್ಯೆ ಬೇಕು? ಎಂದು ಕೇಳುವ ತಂದೆತಾಯಿಗಳಿಗೆ ಇಂದಿಗೂ ನಮ್ಮಲ್ಲಿ ಕೊರತೆ ಇಲ್ಲ. ಒಂದು ವೇಳೆ ಉನ್ನತ ವ್ಯಾಸಂಗ ಮುಗಿ ಸಿದ್ದರೂ, ಉದ್ಯೋಗಾವಕಾಶ ದೊರೆತರೂ, 'ನಮ್ಮ ಮನೆಯ ಹೆಣ್ಣು ಮಕ್ಕಳು ಹೊರಗೆ ಹೋಗಿ ದುಡಿಯ ಬಾರದೆನ್ನುವ ಹಿರಿಯರಿಂದಾಗಿ ಆಕೆ ನಿರುದ್ಯೋಗಿ ಯಾಗಿರಬೇಕಾಗುತ್ತದೆ. ವೈದ್ಯಕೀಯದಲ್ಲಿ ಉನ್ನತ ವ್ಯಾಸಂಗ ಮುಗಿಸಿದ ಹೆಣ್ಣು ಮಗಳೋರ್ವಳು ಅತ್ತೆಯ ಸೊಸೆಯಾಗಿ ತನ್ನೆಲ್ಲ ಚಾತುರ್ಯವನ್ನೂ ಬುದ್ಧಿವಂತಿಕೆ ಯನ್ನೂ ಅಡಿಗೆ ಮನೆಯ ಸಿಂಕಿನಲ್ಲಿ ಹರಿಸಿ ಬಿಡುವು ದನ್ನು ನಾನು ಕಂಡಿದ್ದೇನೆ.

ವಿದ್ಯಾವಂತ ಮಹಿಳೆಯರು ಹೊರಗೆ ದುಡಿಯ ಲಾರಂಭಿಸಿದ್ದರೂ ಪುರುಷರಷ್ಟೇ ಸಮಾನ ಅವಕಾಶಗಳು ಆಕೆಗೆ ದೊರೆಯುವುದಿಲ್ಲ. ಕೆಲವೊಮ್ಮೆ ತನ್ನ ಪದೋನ್ನತಿ ಯನ್ನೂ ನಿರಾಕರಿಸಿ ಇದ್ದಲ್ಲೆ ಉಳಿಯಬೇಕಾದಂತಹ ಪರಿಸ್ಥಿತಿಯು ಆಕೆಗೆದುರಾಗುತ್ತದೆ. ಪುರುಷ ಪ್ರಧಾನ ಸಮಾಜ ಒಂದು ರೀತಿಯ ಪಕ್ಷಪಾತ ಧೋರಣೆಯನ್ನೂ ಮುಂದುವರೆಸಿಕೊಂಡೇ ಬಂದಿದೆ. ನಮ್ಮ ದೇಶದ

ರಾಜಕೀಯ ವಲಯದಲ್ಲಿ ವರ್ಷದಿಂದ ವರ್ಷಕ್ಕೆ ಮಹಿಳೆಯರ ಸಂಖ್ಯೆ ಕಮ್ಮಿಯಾಗುತ್ತಲೇ ಹೋಗುತ್ತಿದೆ. ಆಳುವ ಪಕ್ಷವಾಗಲಿ, ವಿರೋಧ ಪಕ್ಷವಾಗಲಿ ಚುನಾವಣೆಗೆ ಟಿಕೆಟ್ ನೀಡುವ ಸಂದರ್ಭದಲ್ಲಿ ಮಹಿಳೆಯರೆಡೆಗೆ ಜಾಣ ಕುರುಡನ್ನು ನಟಿಸುತ್ತಿದೆ. 1989 ರ ಸಂಪತ್ತಿನಲ್ಲಿ ಮಹಿಳೆಯರ ಸಂಖ್ಯೆ ಹಿಂದಿನ ಸಂಸತ್ತುಗಳಿಗಿಂತ ಕಮ್ಮಿಯಾಗಿದೆ. ಈ ಬಾರಿಯ ನಮ್ಮ ರಾಜ್ಯದ ವಿಧಾನಸಭೆಗಳಿಗಿಂತ ಕಮ್ಮಿಯಾಗಿದೆ. 37 ಜನರ ಬೃಹತ್ ಮಂತ್ರಿಮಂಡಲದಲ್ಲಿರುವ ಮಹಿಳೆಯರ ಸಂಖ್ಯೆ ಕೇವಲ ಮೂರು ಮಾತ್ರ.

ಭಾರತದ ಸಂವಿಧಾನದಲ್ಲಿ ಸರ್ವರೂ ಸಮಾನರು. ಲಿಂಗದ ಆಧಾರದಲ್ಲಾಗಲಿ, ಜಾತಿ, ಧರ್ಮಗಳ ಆಧಾರದಲ್ಲಾಗಲಿ, ಪಕ್ಷಪಾತ ಮಾಡುವುದನ್ನು ಸಂವಿಧಾನ ನಿಷೇಧಿಸಿದೆ. ಭಾರತದ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದೆ. ಆದರೆ ಅದೇ ಸಂವಿಧಾನವು ಪ್ರತಿಯೊಬ್ಬರ ಧಾರ್ಮಿಕ ಸ್ವಾತಂತ್ರ್ಯವನ್ನೂ ಎತ್ತಿ ಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನವು ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ. ಸಂವಿಧಾನದಲ್ಲಿ ಸಮಾನತೆ ಇದ್ದರೂ ವ್ಯಕ್ತಿ ನಿಯಮಗಳನ್ನು ಧಾರ್ಮಿಕ ನಿಯಮಗಳಿಗನುಸಾರವಾಗಿ ರಚಿಸಿರುವುದರಿಂದ ಮಹಿಳೆಯರು ತಮ್ಮ ಸಂವಿಧಾನಿಕ ಹಕ್ಕುಗಳಿಂದ ವಂಚಿತರಾಗುತ್ತಾರೆ. ನ್ಯಾಯಾಧೀಶರೋರ್ವರು ಹಿಂದೂ ವಿಚ್ಛೇದಿತ ಮಹಿಳೆಗೆ ಜೀವನಾಂಶ ನೀಡಬೇಕೆಂದು ತೀರ್ಪು ನೀಡಿದರೆ ಮುಸ್ಲಿಂ ಮಹಿಳೆಗೆ ಮೂರು ತಿಂಗಳ ಅವಧಿಗೆ ಮಾತ್ರ ಜೀವನಾಂಶ ನೀಡಬೇಕೆಂದು ತೀರ್ಪು ನೀಡಬೇಕಾಗುತ್ತದೆ ಭಾರತದ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದ್ದರೂ ಇಂತಹ ವೈರುಧ್ಯಗಳಿಂದಾಗಿ ಈ ಮನ್ನಣೆ ಮಸುಕಾಗಿದೆ. ಸ್ತ್ರೀ ಪುರುಷರಲ್ಲಿ ಮಾತ್ರವಲ್ಲ ಈ ದೇಶದ ಸ್ತ್ರೀಯರಲ್ಲೆ ಸಮಾನತೆ ಇಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. ನಮ್ಮ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ಈ ಅಸಮಾನತೆಯನ್ನು ಹೋಗಲಾಡಿಸಿ ಸಮಾನತೆ ತರುವುದು ಕಷ್ಟಕರವಾದ ಪ್ರಯತ್ನವೆಂದೇ ಹೇಳಬೇಕಾಗುತ್ತದೆ.

ಮಹಿಳೆಯರೆಲ್ಲರೂ ಜಾತಿ, ಧರ್ಮಗಳ ಬಲೆಯಿಂದ ಹೊರಬಂದು ಒಟ್ಟಾದಾಗ, ಸಹೋದರಿ ಭಾವದಿಂದ ಪರಸ್ಪರ ಕೈಹಿಡಿದು ಮುನ್ನಡೆದು ಎಲ್ಲ ಅಸಮಾನತೆಗಳ ವಿರುದ್ಧ ಒಕ್ಕೊರಲಿನಲ್ಲಿ ಧ್ವನಿ ಎತ್ತಿದಾಗ ಈ ಪರಿಸ್ಥಿತಿ ಬದಲಾದರೂ ಆಗಬಹುದು- ಅಂತಹ ಒಂದು ನವೋದಯಕ್ಕಾಗಿ ನಾವೆಲ್ಲರೂ ಸಹನೆಯಿಂದ ಕಾಯುವುದೇ ಇಂದು ನಮ್ಮೆದುರಿಗಿರುವ ಹಾದಿಯಾಗಿದೆ.

[ಜನವರಿ 15 ರಂದು ಚಿತ್ರದುರ್ಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಲ್ಲಿ ವ್ಯವಸ್ಥೆಗೊಳಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಅಧ್ಯಕ್ಷ ಭಾಷಣ.]

## ಅಭಿನಂದನೆ

ಬೆಂಗಳೂರಿನ ಸುಮಂಗಲಿ ಸೇವಾಶ್ರಮ ಕರ್ನಾಟಕದಲ್ಲಷ್ಟೇ ಅಲ್ಲ. ರಾಷ್ಟ್ರೀಯವಾಗಿಯೂ ಅತ್ಯಂತ ಮಹತ್ವದ ಸ್ಥಳ. ನೊಂದವರಿಗೆ ತಂಪಾಗಿ, ನೆಲೆಯಿಲ್ಲದವರಿಗೆ ಆಶ್ರಯದಾಣವಾಗಿ, ಹಲವಾರು ಹೆಣ್ಣುಮಕ್ಕಳ ಸ್ವಾವಲಂಬನೆ, ಜಾಗೃತಿಗಾಗಿ, ದುಡಿಯುತ್ತಿರುವ ಈ ಆಶ್ರಮದ ಅಧ್ಯಕ್ಷೆ, ಎಲ್ಲರ ಪ್ರೀತಿಯ 'ಅಮ್ಮ' ಶ್ರೀಮತಿ ಎಸ್. ಜಿ. ಸುಶಿಲಮ್ಮ ಬಾಬಾ ಸಾಹೇಬ್ ಅಂಬೇಡ್ಕರ್ ಪ್ರಶಸ್ತಿಯೂ ಸೇರಿದಂತೆ ಹಲವಾರು ರಾಷ್ಟ್ರೀಯ ಮತ್ತು ರಾಜ್ಯಮಟ್ಟದ ಪ್ರಶಸ್ತಿ, ಪದಕಗಳನ್ನು ಪಡೆದವರು ಅವರ ಕಿರೀಟಕ್ಕೆ ಈಗ ಮತ್ತೊಂದೇ ಗರಿ ಸೇರಿದೆ. ಈ ವರ್ಷದ ಜಾನಕಿದೇವಿ ಬಜಾಜ್ ಪ್ರಶಸ್ತಿ ಪಡೆದಿರುವ ಶ್ರೀಮತಿ ಸುಶೀಲಮ್ಮನವರನ್ನು **ಅಚಲ** ಅಭಿನಂದಿಸುತ್ತದೆ.

# ಮಡಿಕೇರಿಯಲ್ಲಿ ಸ್ತ್ರೀವಾದಿ ಸಾಹಿತ್ಯ ಶಿಬಿರ

**ಕರ್ನಾಟಕ ಲೇಖಕಿಯರ ಸಂಘವು ಡಿಸೆಂಬರ್ 4 ಮತ್ತು 5ರಂದು ಮಡಿಕೇರಿಯಲ್ಲಿ ಸ್ತ್ರೀವಾದಿ ಸಾಹಿತ್ಯ ಶಿಬಿರವೊಂದನ್ನು ಹಮ್ಮಿಕೊಂಡಿತ್ತು ಆ ಸಂದರ್ಭದಲ್ಲಿ ಶಿಬಿರದ ಆರಂಭದಲ್ಲಿ ಶಿಬಿರದ ಉದ್ದೇಶವನ್ನು ಕುರಿತು ಮಾತನಾಡಿದ ಡಾ॥ ಬಿ. ಎನ್. ಸುಮಿತ್ರಾಬಾಯಿಯವರ ಮಾತುಗಳಿವು.**

ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯದ ವಿಮರ್ಶೆಯ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವ ತರಾತುರಿಯೊಂದು ಇತ್ತೀಚಿನ ಐದು ವರ್ಷಗಳಿಂದ ಎದ್ದು ತೋರುತ್ತಿದೆ. ವಿದೇಶೀಯ ವಿಶ್ವವಿದ್ಯಾನಿಲಯಗಳಲ್ಲಿ ಸ್ತ್ರೀವಾದಿ ಚಿಂತನೆ. ಮಹಿಳಾ ಅಧ್ಯಯನಗಳಿಗೆ ದೊರೆತಿರುವ ಪ್ರಾಮುಖ್ಯ ದಿಂದಲೋ. ಜಾಗತಿಕ ಸಾಹಿತ್ಯ ವಿಮರ್ಶೆಯಲ್ಲಿ ಸ್ತ್ರೀವಾದಿ ವಿಮರ್ಶಾ ಪಂಥವನ್ನು ಅನಿವಾರ್ಯವೆಂಬಷ್ಟರ ಮಟ್ಟಿಗೆ ಗುರುತಿಸುತ್ತಿರುವುದರಿಂದಲೋ, ಅಥವಾ ಇಲ್ಲಿನ ವಿಶ್ವ ವಿದ್ಯಾನಿಲಯಗಳಲ್ಲಿ ಮಹಿಳಾ ಅಧ್ಯಯನದ ವಿಭಾಗಗಳು ಶುರುವಾಗಿದ್ದು, ಸಂಶೋಧಕರಿಗೆ ಇದು ಹೊಸದಾದ, ಫಲವತ್ತಾದ ಕ್ಷೇತ್ರವೆನಿಸುತ್ತಿರುವುದರಿಂದಲೋ ಒಟ್ಟಿನಲ್ಲಿ ಇಂಥಹ ಕೃತಿಗಳನ್ನು ರಚಿಸಲು, ಸಂಪಾದಿಸಲು ಸ್ತ್ರೀಯರು, ಪುರುಷರು, ಬರಹಗಾರರು, ವಿಮರ್ಶಕರು ಮುಂದಾಗಿದ್ದಾರೆ.

ಆದರೆ ಪಠ್ಯಗಳಲ್ಲಿ ಬಹಳಷ್ಟು ಸಲ ಕಂಡುಬರುತ್ತಿರುವ ಬಹುಮುಖ್ಯ ಹಾಗೂ ಆಕ್ಷೇಪಣೀಯವಾದ ಕೊರತೆ ಎಂದರ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಸ್ತ್ರೀವಾದಿ ಸಿದ್ಧಾಂತ, ಸಂಘಟಿತ ಹೋರಾಟ ಮತ್ತು ಅದರ ಫಲವಾಗಿ ರೂಪಿಸುತ್ತಿರುವ ವಿಮರ್ಶೆಯ ಸ್ವರೂಪ ಕುರಿತಂತೆ ಸಂಪೂರ್ಣ ಅಜ್ಞಾನ, ಹಾಗೂ ಪ್ರಧಾನ ಪರಂಪರೆಗೆ ಸಹಜವಾಗಿರುವ ದಿವ್ಯ ನಿರ್ಲಕ್ಷ್ಯ. ಇದರ ಫಲವಾಗಿ ಪ್ರತಿಯೊಬ್ಬರೂ ತಾವು ಸಿದ್ಧಪಡಿಸುತ್ತಿರುವುದೇ ಈ ದಿಕ್ಕಿನಲ್ಲಿ ಮೊಟ್ಟ ಮೊದಲ ಯತ್ನ ಎಂಬ ಧಾರ್ಷ್ಟ್ಯವನ್ನು ಮುನ್ನುಡಿಗಳಲ್ಲಿ ಪ್ರಕಟಿಸಿದ್ದಾರೆ. ಹಾಗೆಯೇ ಕನ್ನಡದ ಪ್ರದೇಶ, ಭಾಷೆಗಳಿಗೆ ತಾವೇ ಹೊಸದಾಗಿ ಸ್ತ್ರೀವಾದಿ ಚಿಂತನೆಗಳನ್ನ ಪರಿಚಯಿಸುವ/ಬಿತ್ತುವ ರೀತಿಯಲ್ಲಿ, ನಿರ್ವಾತದಲ್ಲಿ ಎಂಬಂತೆ ಹೊರಗಿನಿಂದ ವಿಚಾರಗಳನ್ನು ತಂದು ತರ್ಜುಮೆ ಮಾಡಿ ಅದಕ್ಕೆ ಉಪನಿಷತ್ತಿನ ಗುಹೆ, ಬಯಲುಗಳಿಂದ ಪ್ರತೀಕ ಕಲ್ಪಿಸಲು!ಭಾರತೀಯತೆಯ ವೇಷ ತೊಡಿಸಲು ಯತ್ನಿಸುತ್ತಿದ್ದಾರೆ.

ವಾಸ್ತವದಲ್ಲಿ ಜಗತ್ತಿನಲ್ಲಿ ಎಲ್ಲ ದೇಶಗಳಲ್ಲೂ ಸ್ತ್ರೀವಾದಿ ಅರಿವಿನ ಬೆಳವಣಿಗೆ, ಸ್ತ್ರೀಯರ ಸಂಘಟಿತ ಹೋರಾಟಗಳ ರಾಜಕೀಯ ಅನುಭವದ ಫಲವಾಗಿ ಹುಟ್ಟಿಬಂದಿರುವ ಸಾಂಸ್ಕೃತಿಕ ವಿಮರ್ಶೆಯಾಗಿದೆ. ಸ್ತ್ರೀಯರ ಅನುಭವದ ನೆಲೆಯಿಂದ ಪ್ರಧಾನ ಸಂಸ್ಕೃತಿಯ ಮೌಲ್ಯ ಮಾಪನಕ್ಕೆ ಯತ್ನಿಸುವ ಈ ಬೌದ್ಧಿಕ ಚಿಂತನೆ ಭಾರತದಲ್ಲೂ ಸ್ತ್ರೀವಾದಿ ಅರಿವು, ಹೋರಾಟ ರಾಜಕೀಯದ ಅನುಭವಗಳೊಂದಿಗೆ ಗಾಢವಾಗಿ ಬೆಸೆದುಕೊಂಡೇ ಬೆಳೆದುಬರುತ್ತಿದೆ. ಕರ್ನಾಟಕದ ಸಂದರ್ಭದಲ್ಲೂ ಈ ಮಾತು ಅಷ್ಟೇ ಸತ್ಯವಾಗಿದೆ. ಕಳೆದ 15 ವರ್ಷಗಳಿಂದ ಮಹಿಳೆಯರು ಚಿಕ್ಕ ಚಿಕ್ಕ ಸ್ವಾಯತ್ತ ಸಂಘಟನೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡು, ಸ್ಥಳೀಯ ಸಾಂಸ್ಕೃತಿಕ ಸನ್ನಿವೇಶದ ಬಹುಮುಖ್ಯ ಸ್ತ್ರೀ ಸಮಸ್ಯೆಗಳಾಗಿರುವ ವರದಕ್ಷಿಣೆ. ಬಹುಪತ್ನಿತ್ವ, ಕಾಯದೆಯ ಅನ್ಯಾಯ, ವಧೂ ದಹನ, ಸಮೂಹ ಮಾಧ್ಯಮಗಳ ದಬ್ಬಾಳಿಕೆ, ಅತ್ಯಾಚಾರ ಮುಂತಾದ ಸಮಸ್ಯೆಗಳನ್ನು ಎತ್ತಿಕೊಂಡು ಅವುಗಳ ನಿವಾರಣೆಗಾಗಿ ಹೋರಾಟ ನಡೆಸುತ್ತ ಬರುತ್ತಿವೆ. ಜನತಾಂತ್ರಿಕ ನೆಲೆಯಲ್ಲಿ, ಯಾವುದೇ ಸಂಘ ಸಂಸ್ಥೆಗಳ ನೆರವಿಲ್ಲದೆ ವಿಚಾರ ಸಂಕಿರಣ, ಚರ್ಚಾಗೋಷ್ಠಿ, ಬಹಿರಂಗ ಸಭೆ, ಮೆರವಣಿಗೆ ಧರಣಿಗಳಂಥ ಪ್ರತಿಭಟನಾ ತಂತ್ರಗಳಲ್ಲದೆ ಮಹಿಳಾ ಪತ್ರಿಕೆಗಳು, ಪುಸ್ತಕಗಳನ್ನು ಪ್ರಕಟಿಸುವ ಮೂಲಕ ಮಹಿಳೆಯರ ಜಾಗೃತಿಗಾಗಿ ಯತ್ನಿಸುತ್ತಿವೆ. ಇಂಥ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಿರುವ ಜನ ಇವುಗಳನ್ನು ಬೆಂಬಲಿಸುತ್ತಿರುವ ಸಂಘಟನೆಗಳು ತಮ್ಮ ಸೈದ್ಧಾಂತಿಕ ನಿಲುವಿನ ಒಂದು ಅಂಗವಾಗಿಯೇ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ಕೈಗೆತ್ತಿಕೊಂಡು, ಅವುಗಳ ವಿವಿಧ ಆಯಾಮಗಳನ್ನು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಕಟಿಸತೊಡಗಿದ್ದಾರೆ.

ಈ ಯತ್ನಗಳೆಲ್ಲ ಕಣ್ಣು ಕೋರೈಸುವಷ್ಟು ಬೃಹತ್ತಾಗಿ ನಡೆದಿಲ್ಲವಾದರೂ ಸುತ್ತಲಿನವರ ಕಣ್ಣು ತೆರೆಸು

ವಷ್ಟಾದರೂ ಪ್ರಭಾವಶಾಲಿಗಳಾಗಿವೆ ಎಂಬುದು ನನ್ನ ನಂಬಿಕೆ. ಈ ಸಂದರ್ಭದಲ್ಲಿ ಇನ್ನೊಂದು ಮುಖ್ಯ ಸಂಗತಿಯತ್ತ ಗಮನ ಸೆಳೆಯುವುದು ಅನುಚಿತವಾಗಲಾರದು. ಹಲವಾರು ಮಹಿಳಾ ಬರಹಗಾರರು. ವಿವಿಧ ಕ್ಷೇತ್ರಗಳಲ್ಲಿ ಸ್ತ್ರೀಯರಾಗಿ ಪ್ರಾತಿನಿಧ್ಯಗಳಿಸಿದ ಸವಲತ್ತಿನ ಅನುಭವಗಳಿಸಿದವರು ಸ್ತ್ರೀವಾದಿ ವೇದಿಕೆಗಳ ಸಮಾರಂಭಗಳಲ್ಲಿ ಪಾಲ್ಗೊಳ್ಳುತ್ತಿರುವಾಗಲೇ ತಾವು ಈ ಚಿಂತನೆಗೆ ಬದ್ಧರಲ್ಲ, ಏಕೆಂದರೆ ತಾವು ಶೋಷಿತರಲ್ಲ, ಇಲ್ಲವೆ ಸ್ತ್ರೀ-ವಾದಕ್ಕೆ ಒಂದು ನಿರ್ದಿಷ್ಟ ವಿಚಾರವೇ ಇಲ್ಲ, ಮುಂತಾಗಿ ಹೇಳಿಕೆಗಳನ್ನು ಠರಾವು ಎಂಬಂತೆ ಪ್ರತಿಪಾದಿಸಿ, ಪ್ರಚಲಿತ ವ್ಯವಸ್ಥೆಯಿಂದ ಬೆನ್ನು ತಟ್ಟಿಸಿಕೊಳ್ಳುವುದನ್ನು ನೋಡುತ್ತೇವೆ. ಸ್ತ್ರೀವಾದಿ ಸಿದ್ಧಾಂತ, ಹೋರಾಟಗಳಲ್ಲಿ ಕಂಡುಬರುವ ಬಹುರೂಪತೆಯಿಂದಾಗಿ, ಅದರ ಚರಿತ್ರೆಯುದ್ಧಕ್ಕೂ ಅದು ಇಂಥ ಅಸಂಖ್ಯಾತ ಆಪಾದನೆ, ಅವಹೇಳನಗಳನ್ನು ಎದುರಿಸಿದೆ, ಅವುಗಳನ್ನು ಮೀರಿಯೂ ಬೆಳೆಯುತ್ತಿದೆ.

## ಮಡಕೇರಿ ಶಿಬಿರ

### ಒಂದು ವರದಿ

'ಬೂಮಿನ್ ತಬ್ಬಿದ್ ಮೋಡ ಇದ್ದಂಗೆ, ಬೆಳ್ಳಿ ಬಳಿದಿದ್ ರೋಡ್ ಇದ್ದಂಗೆ, ಸಾಫಾಗ್ ಅಳ್ಳ ತಿಟ್ಟಿಲ್ದಂಗೆ ಮಡಕೇರಿಲಿ ಮಂಜು' ಎಂದು ಕವಿ ರಾಜರತ್ನಂರವರು ಮಡಿಕೇರಿಯ ಮಂಜನ್ನು ಹಿಮಾಲಯದ ಹಿಮದ ಸಿರಿಯೇನೋ ಎಂದು ಭ್ರಮಿಸುವ ಹಾಗೆ ಗುಣಗಾನ ಮಾಡಿದ್ದಾರೆ. ರಾಜರತ್ನಂರವರ ಕಾಲದಲ್ಲಿ ಮಡಕೇರಿಯಲ್ಲಿ ಬೆಳಗಿನ ಮಂಜು ರಸ್ತೆಯ ತುಂಬಾ ಬೆಳ್ಳಿಯ ಹಾಗೆ ಬಳಿದಿತ್ತೇನೋ, ಈಗ ನಾವೇ ಸೃಷ್ಟಿಸಿರುವ ಪರಿಸರ ಮಾಲಿನ್ಯದಿಂದ, ನಾವು ಉಪಯೋಗಿಸುವ ವಾಹನಗಳ ಕರಿ ಹೊಗೆಯಿಂದ ಮಡಕೇರಿಯಿಂದ ಮಂಜು ಮಾಯವೇ ಆಗಿ ಬಿಟ್ಟಿದೆ. ಹಳ್ಳತಿಟ್ಟುಗಳು ಸಾಫಾಗಿಲ್ಲದೆ ಹಳ್ಳ ಹಳ್ಳವಾಗಿಯೇ ದಿಣ್ಣೆ ದಿಣ್ಣೆಯಾಗಿಯೇ ದರ್ಶಿಸಲ್ಪಡುತ್ತಿವೆ.

ಏನಾದರೂ ಮಡಕೇರಿಯ ಸೌಂದರ್ಯವೇ ಬೇರೆ, ಬೆಂಗಳೂರಿನಂಥ ಜನ ಜಂಗುಳಿಯ, ಅಧ್ವಾನದ ವ್ಯವಸ್ಥೆಯಲ್ಲಿ ಬೇಸತ್ತವರಿಗೆ ಮಡಿಕೇರಿ ಸ್ವರ್ಗ. ಅಡಿಗೆ ಮನೆ, ಉದ್ಯೋಗ, ಇವುಗಳ ಒತ್ತಡಗಳಿಲ್ಲದೆ, ಮನೆಯ ಒಳಗೆ-ಹೊರಗೆ ಗಡಿಯಾರದ ಜೊತೆ ಜೂಜಾಟವಾಡುವ ಉಬ್ಬಸಗಳಿಲ್ಲದೆ, ಎಲ್ಲವನ್ನೂ ಮರೆತು ಹಾಯಾಗಿ ಹೊಸ ಸಾಧ್ಯತೆಗಳತ್ತ, ಹೊಸವಿವೇಚನೆಗಳತ್ತ ಲೇಖಕಿಯರನ್ನು ತೊಡಗಿಸಿಕೊಳ್ಳಲು ಅನುವಾಗುವಂತೆ ಮಡಕೇರಿಯಿಂದ ಒಂಭತ್ತು ಕಿ.ಮೀ. ದೂರದಲ್ಲಿರುವ ಕ್ಯಾಪಿಟಲ್ ವಿಲೇಜ್‌ನಲ್ಲಿ ಸ್ತ್ರೀವಾದಿ ಸಾಹಿತ್ಯ ಶಿಬಿರವನ್ನು ನಮ್ಮ ಸಂಘವು ಏರ್ಪಡಿಸಿತ್ತು.

ದಿನಾಂಕ ನಾಲ್ಕು ಮತ್ತು ಐದನೇ ಡಿಸೆಂಬರ್ 1994 ನೇ ಭಾನುವಾರ ಮತ್ತು ಸೋಮವಾರಗಳಂದು ಈ ಶಿಬಿರ ನಡೆಯಿತು. ಶಿಬಿರಾರ್ಥಿಗಳಾಗಿ ಆಯ್ಕೆಯಾದ ಹೆಚ್ಚಿನ ಮಹಿಳೆಯರು ಲೇಖಕಿಯರೇ ಆಗಿಲ್ಲದೆ ಕಾಲೇಜು ಉಪನ್ಯಾಸಕಿಯರಾಗಿಯೂ ಸಂಶೋಧಕಿಯರಾಗಿಯೂ ಕರ್ತವ್ಯ ನಿರ್ವಹಿಸುತ್ತಿದ್ದುದು ಒಂದು ಮಹತ್ವದ ಅಂಶವಾಗಿತ್ತು.

ಈ ಶಿಬಿರವನ್ನು ಗಂಭೀರವಾಗಿ ಪರಿಗಣಿಸಬೇಕೆನ್ನುವ ಸಂಘದ ಮುಖ್ಯ ಉದ್ದೇಶವಾದ್ದರಿಂದ ಸ್ತ್ರೀವಾದ ಕುರಿತಾದ ಕೆಲವು ಪಠ್ಯ ಪುಸ್ತಕಗಳನ್ನೂ ಕೆಲವು ವಿಮರ್ಶೆಗೆ ಅನುಕೂಲವಾಗುವಂತಹ ಸಾಹಿತ್ಯ ಕೃತಿಗಳನ್ನೂ ಮೊದಲೇ ಓದಿಕೊಂಡು ಬರಲು ಸೂಚಿಸಲಾಗಿತ್ತು. ಮೊದಲ ಗೋಷ್ಠಿಯಲ್ಲಿ 'ಸ್ತ್ರೀವಾದಿ ಸಿದ್ಧಾಂತಗಳು, ಪಾರಿಭಾಷಿಕ ಪರಿಕಲ್ಪನೆಗಳು, ಸಾಹಿತ್ಯ ವಿಮರ್ಶೆಯಲ್ಲಿ ಅವುಗಳ ಉಪಯುಕ್ತತೆ' — ಈ ಬಗ್ಗೆ ಮಾತನಾಡಿ ಡಾ.ಬಿ.ಎನ್. ಸುಮಿತ್ರಾಬಾಯಿಯವರು, ಸ್ತ್ರೀವಾದ ಪಾಶ್ಚಾತ್ಯರಲ್ಲಿ ಹಾಗೂ ಭಾರತದ ನೆಲದಲ್ಲಿ ಮತ್ತು ಕರ್ನಾಟಕದಲ್ಲಿ ಬೆಳೆದು ಬಂದ ಪರಿಯನ್ನು ಬಹಳ ವಿಸ್ತಾರವಾಗಿ ಹಾಗೂ ನಿಚ್ಚಳವಾಗಿ ವಿವರಿಸಿದರು.

ಸಾಂಸ್ಕೃತಿಕ ಹೋರಾಟಕ್ಕೂ ಸ್ತ್ರೀವಾದ ಸಾಹಿತ್ಯ ವಿಮರ್ಶೆಗೂ ಇರುವ ಸಂಬಂಧ ಲಿಖಿತದ ಮೂಲಕ ನಡೆಯಬಹುದಾದ ಹೋರಾಟ–ಈ ವಿಷಯದ ಬಗ್ಗೆ ಮಾತನಾಡಿದವರು ಶ್ರೀಮತಿ ಎನ್. ಗಾಯಿತ್ರಿಯವರು ಆಫ್ರಿಕಾದಲ್ಲಿ ಕಪ್ಪು ಮಹಿಳೆಯರು ತಮ್ಮ ಗಂಡಂದಿರು ಜೊತೆಯಲ್ಲಿ ವಾಸಿಸುವ ಸೌಲಭ್ಯ ಪಡೆದು ಕೊಳ್ಳುವುದಕ್ಕೆ ಹೋರಾಟ ನಡೆಸಬೇಕಾಯಿತು. ನಂತರ ಆ ಮಹಿಳೆಯರು ದೇಶದ ಸ್ವಾತಂತ್ರ್ಯ ಹಾಗೂ ಅನೇಕ ಮೂಲಭೂತ ಹಕ್ಕುಗಳಿಗಾಗಿ ಹೋರಾಟ ನಡೆಸಿದರು. ಭಾರತೀಯ ಸಂದರ್ಭದಲ್ಲಿ ಹೇಳುವುದಾದರೆ, ಸಂಪ್ರದಾಯವನ್ನೆ ಪ್ರೋತ್ಸಾಹಿಸುವ ಗಾಂಧೀಜೀಯವರೂ ಮಹಿಳೆಯರ ಸಂಘಟನೆ ಹಾಗೂ ಶಿಕ್ಷಣದ ಅಗತ್ಯತೆಯನ್ನು ಕಂಡುಕೊಂಡಿದ್ದರಿಂದ ಇಲ್ಲಿ ಮಹಿಳಾ ಆಂದೋಲನಗಳು ಪ್ರಾರಂಭವಾದವು. ಬಂಗಾಲದಲ್ಲಿ ಆದಿವಾಸಿ ಮಹಿಳೆ

ಯರ ಪರವಾದ ಹೋರಾಟ ನಡೆದಿದೆ. ಆಂಧ್ರದಲ್ಲಿ ಮಹಿಳೆಯರು ನಿಜಾಮರ ವಿರುದ್ಧ ಹೋರಾಡಿದ್ದು ಚರಿತ್ರೆಯಾಗಿದೆ. ತಮಿಳುನಾಡಿನಲ್ಲಿ ರಾಮಸ್ವಾಮಿ ನಾಯ್ಕರ್‌ರವರಿಂದ ಹುಟ್ಟಿದ ಕ್ರಾಂತಿಯಲ್ಲಿ ಮಹಿಳೆಯರು ತುಂಬ ಸಕ್ರಿಯವಾಗಿ ಪಾಲುಗೊಂಡರು. ಹೆಣ್ಣನ್ನು ಅವಮಾನಗೊಳಿಸುವ ಶಬ್ದಗಳನ್ನು ತಿರಸ್ಕರಿಸಿ ಭಾಷೆಯಲ್ಲಿ ಅದಕ್ಕೆ ಪರ್ಯಾಯವಾದ ಪದಗಳನ್ನೇ ಸೃಷ್ಟಿಸಿದರು.

ಕರ್ನಾಟಕದಲ್ಲಿ ಚರಿತ್ರೆಯ ಮುಂದುವರಿಕೆಯಾಗಿ ನಡೆಯುತ್ತಿರುವ ಕೆಲಸದ ಗುರುತಿಸುವಿಕೆ ನಡೆಯಬೇಕಾಗಿದೆ. ಮೈಸೂರು ಮಹಾರಾಜರ ತೃಪ್ತ ರಾಜ್ಯಭಾರದ ಸಮಾಜದಲ್ಲಿ ಪುರುಷರ ಚಳುವಳಿಗಳೂ ಜನಪರವಾಗಿ ಸಶಕ್ತವಾಗಿ ನಡೆದಿಲ್ಲ. ಮಹಿಳಾ ಚಳುವಳಿಗಳೂ ಬಂಗಾಲದಂತೆ, ಆಂಧ್ರದಂತೆ, ನಡೆದಿಲ್ಲ. ಉತ್ತರ ಕರ್ನಾಟಕದಲ್ಲಿ ವರದಕ್ಷಿಣೆ ವಿರೋಧ, ಕಾನೂನಿನಲ್ಲಿ ಬದಲಾವಣೆಗಾಗಿ ಒತ್ತಾಯ ಇತ್ಯಾದಿ ಕೆಲಸಗಳು ನಡೆದಿದೆ. ಕನ್ನಡ ಸಾಹಿತ್ಯ ಚಳುವಳಿಯನ್ನು ಗಮನಿಸಿದರೆ ಅದರಲ್ಲಿ ಮಹಿಳೆಯರು ಗಮನಾರ್ಹವಾಗಿ ಸ್ಪಂದಿಸಿಲ್ಲವಾದರೂ, ಒಟ್ಟು ಭಾರತೀಯ ಹೋರಾಟದ ನೆಲೆಗಳಲ್ಲಿ ವರದಕ್ಷಿಣೆ, ವಧೂದಹನ, ಇತ್ಯಾದಿಗಳಿಗೆ ಖಂಡಿತಾ ಸ್ಪಂದಿಸಿದ್ದಾರೆ. ಈ ಕೆಲಸಗಳನ್ನು ಗುರುತಿಸುವ ಗೌರವಿಸುವ ಕೆಲಸ ಆಗಬೇಕಾಗಿದೆ. ಕನ್ನಡ ಲೇಖಕಿಯರು ಸಾಮಾಜಿಕ ಚಳುವಳಿಯಲ್ಲಿ ಭಾಗವಹಿಸಿದಾಗ ಅವರ ಅನುಭವ ಹಿರಿದಾಗುತ್ತದೆ. ಮತ್ತು ಲೇಖಕಿಯರ ಸಾಮಾಜಿಕ ಹೊಣೆಯೂ ಇದೇ ಆಗಿದೆ' ಎಂದು ಹೇಳಿದರು. ಗಾಯತ್ರಿಯವರ ಮಾತುಗಳಲ್ಲಿ ನಿಚ್ಚಳ ನಿಲುವುಗಳಿದ್ದವು. ಹೋರಾಟದ ತೀವ್ರತೆಯ ಅಗತ್ಯ, ಹಾಗೂ ಅದನ್ನು ಲಿಖಿತದಲ್ಲಿ ದಾಖಲಿಸುವ ಅಗತ್ಯವನ್ನು ತುಂಬ ಸ್ಪಷ್ಟವಾಗಿ ಹೇಳಿದರು.

ವಿಜ್ಞಾನ ಮತ್ತು ಸ್ತ್ರೀವಾದದ ಬಗ್ಗೆ ಮಾತನಾಡಿದವರು ಶ್ರೀಮತಿ ನೇಮಿಚಂದ್ರ. ಪಾಶ್ಚಾತ್ಯರಲ್ಲಿ ಪ್ರಾರಂಭವಾದ ವಿಜ್ಞಾನದ ಮಜಲುಗಳಲ್ಲಿ ಸ್ತ್ರೀಯರ ಪ್ರವೇಶಕ್ಕೆ ಹೇಗೆ ಬಹಿಷ್ಕಾರಗಳನ್ನು ಹಾಕಲಾಗಿತ್ತು. ಎನ್ನುವುದನ್ನು ಉದಾಹರಣೆಗಳ ಸಹಿತ ವಿವರಿಸಿದರು. ಸತ್ಯಶೋಧಕರು, ವಿಜ್ಞಾನಿಗಳು ಎನಿಸಿಕೊಂಡವರೂ ಮಹಿಳೆಯರ ಬಗ್ಗೆ ಹೇಗೆ ಪೂರ್ವಾಗ್ರಹ ಪೀಡಿತರಾಗಿದ್ದರು ಎನ್ನುವುದನ್ನು ನೇಮಿಚಂದ್ರ ವಿವರಿಸಿದರು. ಗಣಿತ ಕಲಿತರೆ ಮಹಿಳೆ ಅಬಲೆಯಾಗುತ್ತಾಳೆ ಎನ್ನುವ ನಂಬಿಕೆ ಪಾಶ್ಚಾತ್ಯರಲ್ಲಿ ಬಹಳ ಕಾಲ ಪ್ರಚಲಿತವಿದ್ದಿತಂತೆ. 17ನೇ ಶತಮಾನದ ವಿಜ್ಞಾನಿಗಳು ಮಹಿಳೆಯ ಮಿದುಳು 200 ಗ್ರಾಂ ತೂಕ ಕಡಿಮೆ ಇದೆ ಎನ್ನುವುದನ್ನು ಸಾರಾಸಗಟಾಗಿ ನಂಬುತ್ತಿದ್ದರಂತೆ! ಅರಿಸ್ಟಾಟಲ್ ನಂತಹ ಮೇಧಾವಿಯೂ ಹೆಣ್ಣಿಗೆ ಗಂಡಿಗಿಂತ ಕಡಿಮೆ ಹಲ್ಲುಗಳಿವೆ ಎಂದು ತಿಳಿದಿದ್ದನಂತೆ! ಗಂಡಿನ ಮಿದುಳು ಹೆಣ್ಣಿನ ಮಿದುಳಿಗಿಂತ ವಿಶಾಲವಾಗಿದೆ ಎಂದು ಸಾಧಿಸ ಹೊರಟವರು ಪಟ್ಟ ಫಜೀತಿಗಳನ್ನು ನೇಮಿಚಂದ್ರ ತುಂಬ ಸ್ವಾರಸ್ಯಕರವಾಗಿ ವಿವರಿಸಿದರು.

ತಮಾಷೆಯೆಂದರೆ ವಿಜ್ಞಾನರಂಗದಲ್ಲಿ ಹೆಚ್ಚು ಸಾಧ್ಯತೆಗಳು ಹೆಚ್ಚಿನ ಯಶಸ್ಸುಗಳೂ ಲಭಿಸಿದ್ದು ಮೇರಿಕ್ಯೂರಿ ಮತ್ತು ಅವಳಿಗಿಂತ ಮೊದಲು ಅನೇಕ ಮಹಿಳೆಯರು ಈ ಕ್ಷೇತ್ರವನ್ನು ಪ್ರವೇಶಿಸಿದ ಮೇಲೆಯೇ! ವೈದ್ಯಕೀಯ ರಂಗದಲ್ಲೂ ಸಹ ಮಹಿಳೆ ಪ್ರವೇಶಿಸಬೇಕಾದರೆ ಸಾಕಷ್ಟು ಹೋರಾಟವನ್ನೇ ನಡೆಸಬೇಕಾಯಿತು. ಮಾನವಶಾಸ್ತ್ರ, ಮನಃಶಾಸ್ತ್ರ ಎಲ್ಲ ರಂಗಗಳಲ್ಲಿಯೂ ಮಹಿಳೆಯ ಪ್ರವೇಶ ಹೋರಾಟದೊಂದಿಗೇ ಆಗಿದೆ ಎನ್ನುವುದನ್ನು ನೇಮಿಚಂದ್ರ ಸೋದಾಹರಣವಾಗಿ ವಿವರಿಸಿದರು. ಡಾ॥ ವಿಜಯಾದಬ್ಬೆಯವರು ಸ್ತ್ರೀವಾದ ಮತ್ತು ಅಂತರಾಶಾಸ್ತ್ರೀಯ ಅಧ್ಯಯನವನ್ನು ಕುರಿತು ಮಾತನಾಡಿದರು. ಸ್ತ್ರೀವಾದಿ ವಿಮರ್ಶೆಯ ಹುಟ್ಟು ಮತ್ತು ಬೆಳವಣಿಗೆಯು ಅಂತರಾಶಾಸ್ತ್ರೀಯ ನೆಲೆಯ ಮೇಲೆ ನಿಂತಿದೆ. ಗ್ರೀರ್‌ರ ಬುವಾರ ಕೃತಿಯಿಂದ ಹಿಡಿದು ಈಚಿನವರೆಗೂ ಸ್ತ್ರೀವಾದಿ ವಿಮರ್ಶೆ ಹಲವು ಕ್ಷೇತ್ರಗಳ ಸಂಶೋಧನೆಗಳೊಂದಿಗೆ ಆಂತರಿಕ ಸಂಬಂಧವನ್ನು ಪಡೆದು ಬೆಳೆದಿದೆ. ಈ ವಿಮರ್ಶೆಯನ್ನು ಬೆಳೆಸಿದ ಹಲವರು ಪತ್ರಿಕೋದ್ಯಮ, ತತ್ವಶಾಸ್ತ್ರ, ಭಾಷಾಶಾಸ್ತ್ರ, ಮನಃಶಾಸ್ತ್ರ ಮೊದಲಾದ ಕ್ಷೇತ್ರಗಳಿಂದ ಬಂದವರಾಗಿದ್ದಾರೆ. ಹಲವು ಕ್ಷೇತ್ರಗಳ ತಿಳುವಳಿಕೆಯ ಪ್ರಯೋಜನವನ್ನು ಇಲ್ಲಿ ಮುಂದಿನ ಸಂಶೋಧನೆಗಳಿಗೆ ಬುನಾದಿಯಾಗಿರಿಸಿಕೊಳ್ಳಲಾಗಿದೆ. ಸ್ತ್ರೀವಾದಿ ವಿಮರ್ಶೆಯ ಶಾಖೆಗಳ ಭಾಷಾವಿಜ್ಞಾನ, ಮನೋವಿಶ್ಲೇಷಣಾಶಾಸ್ತ್ರ, ಸಾಂಸ್ಕೃತಿಕ, ಸಾಮಾಜಿಕ ಮಾನವಶಾಸ್ತ್ರವೇ ಮೊದಲಾದ ಕ್ಷೇತ್ರಗಳನ್ನು ಆಧರಿಸಿದೆ ಎಂದು ತಿಳಿಸಿದರು.

5–12–94ರ ಸೋಮವಾರ ಬೆಳಿಗ್ಗೆ ಕನ್ನಡದಲ್ಲಿನ ಸ್ತ್ರೀವಾದಿ ಸಾಹಿತ್ಯ ಗ್ರಂಥಗಳ ಪರಿಚಯಾತ್ಮಕ ವಿಮರ್ಶೆ ವಿಶ್ಲೇಷಣೆಯನ್ನು ಡಾ॥ ವಿಠರಾಜಕ್ರವರ್ತಿ ಹಾಗೂ ಡಾ॥ಪ್ರೀತಿ ಶುಭಚಂದ್ರರವರು ಪ್ರಾರಂಭಿಸಿದರು. ಕನ್ನಡದಲ್ಲಿ ಈ ಬಗ್ಗೆ ಇವೆ. ಎಂದು ಹೇಳಬಹುದಾದ 12 ಕೃತಿ

ಗಳು ಪ್ರಕಟವಾಗಿದ್ದು, ಅವುಗಳನ್ನು ಅಲ್ಲಿ ಶಿಬಿರಾರ್ಥಿಗಳ ಅನುಕೂಲಕ್ಕಾಗಿ ಪ್ರದರ್ಶಿಸಲಾಗಿತ್ತು. ಮೀರಾರವರ ಅಭಿಪ್ರಾಯವೆಂದರೆ 'ಈ ಕೃತಿಗಳ ಕೆಲವು ಲೇಖಕ ಹಾಗೂ ಲೇಖಕಿಯರು ಸ್ತ್ರೀ ವಾದದ ಬಗ್ಗೆ ಸ್ಪಷ್ಟ ಕಲ್ಪನೆ ಪಡೆದಿಲ್ಲದಿರುವುದು ಹಾಗೂ ಪುರುಷರ ಆರ್ನಮೆಂಟಲ್ (ಅಲಂಕಾರಿಕ) ಭಾಷೆಯನ್ನು ಬಳಸಿ ಅದರ ಸಹಜತೆಯನ್ನು ಬಿಟ್ಟುಕೊಟ್ಟಿರುವುದು, ಸ್ತ್ರೀವಾದದ ಒಂದು ಉಪಸಂಸ್ಕೃತಿ ಆಗಬೇಕಿಲ್ಲ. ಭಾರತೀಯ ಸ್ತ್ರೀ ಎನ್ನುವಾಗ ವೈದಿಕ ಸಂಸ್ಕೃತಿಯನ್ನೇ ಮೂಲವಾಗಿಟ್ಟುಕೊಳ್ಳಬೇಕಾಗುತ್ತದೆ. ಭಾರತೀಯ ಎನ್ನುವ ಶಬ್ದವೇ ಆಧುನಿಕ! ಹರಪ್ಪ ಮೊಹೆಂಜೊದಾರೋ ಸಂಸ್ಕೃತಿ ಮೂಲವಾದರೆ ಅಲ್ಲಿ ಸ್ತ್ರೀ ಸಂಸ್ಕೃತಿಯೇ ಮೂಲವಾಗುತ್ತದೆ, ಆದ್ದರಿಂದ ಪ್ರಸ್ತಾವನೆಯ ಪರಿಕಲ್ಪನೆಯೆ ಬದಲಾಗಬೇಕಾಗಿದೆ. ಈಗಾಗಲೇ ಬಂದಿರುವ ಈ ಕನ್ನಡ ಕೃತಿಗಳಲ್ಲಿ ಕೆಲವು ಕೃತಿಗಳು ಈ ಗೊಂದಲಗಳಿಂದ ಮುಕ್ತವಾಗಿಲ್ಲ.'

ಡಾ. ಪ್ರೀತಿ ಶುಭಚಂದ್ರರವರ ಅನಿಸಿಕೆಗಳು ಹೀಗಿವೆ: "ಕನ್ನಡ ನವೋದಯ ಎದುರಿಸಿದ ಸ್ಥಿತಿಯನ್ನೇ ಸ್ತ್ರೀವಾದಿ ಸಾಹಿತ್ಯ ಎದುರಿಸಿದೆ. ಪರಂಪರಾನುಗತವಾಗಿ ಬಂದ ಜ್ಞಾನ ಮತ್ತು ವಸಾಹತುಶಾಹಿ ಶಿಕ್ಷಣದ ಜ್ಞಾನ ಇದರಿಂದ ಅನೇಕ ರೀತಿಯ ಗೊಂದಲಗಳು ಉಂಟಾಗಿವೆ. ಚಾರಿತ್ರಿಕ ಆಯಾಮದ ಅಧ್ಯಯನ ವಿವರವಾಗಿ ನಡೆದಿಲ್ಲ. ಮಹಿಳಾ ಕಾವ್ಯದ ಬಗ್ಗೆ ಗಂಭೀರವಾದ ವಿಮರ್ಶೆ ಸ್ತ್ರೀವಾದಿ ಆಯಾಮದಲ್ಲಿ ನಡೆದಾಗ ಅದು ಸ್ತ್ರೀ ಕಾವ್ಯಮೀಮಾಂಸೆಯೂ ಆಗುತ್ತದೆ.

ಈ ಹಂತದಲ್ಲಿ ಕೆಲವು ಪುರುಷರ ಕೃತಿಗಳಲ್ಲಿರುವ ಸ್ತ್ರೀವಾದದ ಬಗ್ಗೆ ಗೊಂದಲ, ಹಾಗೂ ಸ್ತ್ರೀವಾದದ ಹೆಸರಿನಲ್ಲಿ ಸಂಪ್ರದಾಯವಾದ ಮತ್ತು ಸ್ತ್ರೀ ವಿರುದ್ಧವಾದ ಅವಮಾನವೀಯ ನಿಲುವುಗಳನ್ನೇ ಬಿಂಬಿಸುವ ಅವರ ಪ್ರಯತ್ನಗಳನ್ನು ಖಂಡಿಸಲಾಯಿತು. ಈ ಚರ್ಚೆಯ ನಂತರ ತಮ್ಮ ಕೃತಿಯ ಹಾಗೂ ತಮ್ಮ ನಿಲುವುಗಳ ಬಗ್ಗೆ ಲೇಖಕಿಯರು ಆತ್ಮ ವಿಮರ್ಶೆ ಮಾಡಿಕೊಳ್ಳುವರೆಂಬ ಆಶಯದೊಂದಿಗೆ ಈ ಚರ್ಚೆ ಮುಕ್ತಾಯವಾಯಿತು.

ನಂತರ ಮೂರು ಗುಂಪುಗಳಲ್ಲಿ ಆಯ್ದ ಕತೆ, ಕವನ, ಕಾದಂಬರಿಗಳ ಬಗ್ಗೆ ಸ್ತ್ರೀವಾದಿ ಸಾಹಿತ್ಯ ಪ್ರಾಯೋಗಿಕ ವಿಮರ್ಶೆ ನಡೆಯಿತು.

ವರದಿ : **ಶಾಂತಾನಾಗರಾಜ್**

***Reg No. MAG (5) PRC. DEGL 036/89/87***
BOOK-POST/Periodicals
***To***

*If undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.